# ಗ್ರಾಮೀಣಾಭಿವೃದ್ಧಿಯಲ್ಲಿ ಸರ್ಕಾರೇತರ ಸಂಸ್ಥೆಗಳ ಪಾತ್ರ :

## ದಕ್ಷಿಣಕನ್ನಡ ಜಿಲ್ಲೆಯಲ್ಲಿ ಒಂದು ಅಧ್ಯಯನ

ಹಂಪಿ ಕನ್ನಡ ವಿಶ್ವವಿದ್ಯಾಲಯದ ಅಭಿವೃದ್ಧಿ ಅಧ್ಯಯನ ವಿಭಾಗದ ಎಂ.ಫಿಲ್
ಪದವಿಗಾಗಿ ಸಾದ್ಧರಪಡಿಸಿದ ಸಂಪ್ರಬಂಧ


ಸಂಶೋಧನಾ ವಿದ್ಯಾರ್ಥಿ

**ಚೇತನ್**

ನೋಂದಣಿ ಸಂಖ್ಯೆ-**KTSMDS-00627**

ಮಾರ್ಗದರ್ಶಕರು

ಡಾ.ಸುರೇಶರಮಣ ಮಯ್ಯ

ವಾಣಿಜ್ಯ ವಿಭಾಗ

ಮಹಾತ್ಮಾ ಗಾಂಧಿ ಮೆಮೊರಿಯಲ್ ಕಾಲೇಜು,

ಉಡುಪಿ



೨೦೧೩





ಕರ್ನಾಟಕ ಥಿಯೋಲಾಜಿಕಲ್ ಸಂಶೋಧನಾ ಕೇಂದ್ರ ಬಲ್ಮಠ, ಮಂಗಳೂರು-೦೧

1094

# ಗ್ರಾಮೀಣಾಭಿವೃದ್ಧಿಯಲ್ಲಿ ಸರ್ಕಾರೇತರ ಸಂಸ್ಥೆಗಳ ಪಾತ್ರ :

## ದಕ್ಷಿಣಕನ್ನಡ ಜಿಲ್ಲೆಯಲ್ಲಿ ಒಂದು ಅಧ್ಯಯನ

ಹಂಪಿ ಕನ್ನಡ ವಿಶ್ವವಿದ್ಯಾಲಯದ ಅಭಿವೃದ್ಧಿ ಅಧ್ಯಯನ ವಿಭಾಗದ ಎಂ.ಫಿಲ್
ಪದವಿಗಾಗಿ ಸಾದರಪಡಿಸಿದ ಸಂಪ್ರಬಂಧ


ಸಂಶೋಧನಾ ವಿದ್ಯಾರ್ಥಿ

**ಚೇತನ್**

ನೋಂದಣಿ ಸಂಖ್ಯೆ–**KTSMDS-00627**

ಮಾರ್ಗದರ್ಶಕರು

**ಡಾ.ಸುರೇಶರಮಣ ಮಯ್ಯ**

ವಾಣಿಜ್ಯ ವಿಭಾಗ

ಮಹಾತ್ಮಾ ಗಾಂಧಿ ಮೆಮೊರಿಯಲ್ ಕಾಲೇಜು,

ಉಡುಪಿ



೨೦೧೩

ಕರ್ನಾಟಕ ತಿಯೋಲಾಜಿಕಲ್ ಸಂಶೋಧನಾ ಕೇಂದ್ರ ಬಲ್ಮಠ, ಮಂಗಳೂರು–೦೧

# ಯೋಗ್ಯತಾ ಪತ್ರ

ಚೇತನ್ ಅವರು ನನ್ನ ಸಲಹೆ ಮತ್ತು ಮಾರ್ಗದರ್ಶನದಲ್ಲಿ **ಗ್ರಾಮೀಣಾಭಿವೃದ್ಧಿಯಲ್ಲಿ ಸರ್ಕಾರೇತರ ಸಂಸ್ಥೆಗಳ ಪಾತ್ರ: ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಒಂದು ಅಧ್ಯಯನ** ಎಂಬ ಶೀರ್ಷಿಕೆಯ ಈ ಸಂಪ್ರಬಂಧವನ್ನು ಎಂ.ಫಿಲ್ ಪದವಿ ಪ್ರಾಪ್ತಿಗಾಗಿ ಹಂಪಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸಬೇಕೆಂದು ಸಿದ್ಧಪಡಿಸಿದ್ದಾರೆ. ಈ ಸಂಪ್ರಬಂಧವು ಸಂಶೋಧಕರ ಸ್ವಂತ ಪರಿಶ್ರಮ, ವಿಶ್ಲೇಷಣೆ, ಅಭಿಪ್ರಾಯ ಸಂಗ್ರಹ ಮತ್ತು ಸಂಶೋಧನೆಯ ಫಲಸ್ವರೂಪವಾಗಿದೆ. ಇವರು ಸಂಪ್ರಬಂಧದ ವಿಷಯವನ್ನು ಅಥವಾ ಇದರ ಯಾವುದೇ ಭಾಗವನ್ನು ಈ ಮೊದಲು ಯಾವುದೇ ಪದವಿಗಾಗಲಿ ಅಥವಾ ಇನ್ನಿತರ ಉದ್ದೇಶಗಳಗಾಗಿಯಾಗಲಿ ಬಳಸಿಕೊಂಡಿಲ್ಲ.

**ಡಾ. ಸುರೇಶರಮಣ ಮಯ್ಯ**

ಸಂಶೋಧನ ಮಾರ್ಗದರ್ಶಕರು

**ದಿನಾಂಕ :** 10-7-2013

# ಪ್ರಮಾಣ ಪತ್ರ

ಹಂಪಿ ಕನ್ನಡ ವಿಶ್ವವಿದ್ಯಾಲಯದ ಎಂ.ಫಿಲ್ ಪದವಿಗಾಗಿ ಸಾದರಪಡಿಸಿದ **ಗ್ರಾಮೀಣಾಭಿವೃದ್ಧಿಯಲ್ಲಿ ಸರ್ಕಾರೇತರ ಸಂಸ್ಥೆಗಳ ಪಾತ್ರ : ದಕ್ಷಿಣಕನ್ನಡ ಜಿಲ್ಲೆಯಲ್ಲಿ ಒಂದು ಅಧ್ಯಯನ** ಎಂಬ ಶೀರ್ಷಿಕೆಯ ಈ ಸಂಪ್ರಬಂಧವು ನನ್ನ ಸ್ವತಂತ್ರ ಕೃತಿಯಾಗಿದ್ದು, ವಿಶ್ಲೇಷಣೆ ಮತ್ತು ಅಧ್ಯಯನದ ಫಲೋದಯವಾಗಿದೆ. ಮಂಗಳೂರಿನ ಕರ್ನಾಟಕ ತಿಯೊಲಾಜಿಕಲ್ ಸಂಶೋಧನಾ ಕೇಂದ್ರದಲ್ಲಿ ಡಾ. ಸುರೇಶರಮಣ ಮಯ್ಯ ಅವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ ಈ ಸಂಪ್ರಬಂಧವನ್ನು ಬೇರಾವುದೇ ಪದವಿ, ಡಿಪ್ಲೋಮಾ ಅಥವಾ ತತ್ಸಮಾನ ಉಪಾಧಿಗಳ ಪ್ರಾಪ್ತಿಗಾಗಿ ಅಥವಾ ಆರ್ಥಿಕ ಲಾಭಕ್ಕಾಗಿ ಇಡಿಯಾಗಿ ಅಥವಾ ಬಿಡಿಯಾಗಿ ಬಳಸಿಕೊಂಡಿಲ್ಲವೆಂದು ನಾನು ಈ ಮೂಲಕ ದೃಢಪಡಿಸುತ್ತೇನೆ.

**ಚೇತನ್**
**ಸಂಶೋಧಕರು**

**ದಿನಾಂಕ :** 10-7-2013

# ಅಧ್ಯಯನದ ವಿವರಗಳು

| ಕ್ರಮ ಸಂಖ್ಯೆ | ಶೀರ್ಷಿಕೆ | ಪುಟ ಸಂಖ್ಯೆ |
| --- | --- | --- |

# ಕೋಷ್ಟಕಗಳ ಪಟ್ಟಿ

# ನಕ್ಷೆ ಮತ್ತು ರೇಖಾ ನಕ್ಷೆಗಳು

# ಅಧ್ಯಾಯ –೧

# ಅಧ್ಯಯನದ ಉದ್ದೇಶ, ಸ್ವರೂಪ ಮತ್ತು ಅಧ್ಯಾಯಗಳ ಪರಿಚಯ

## ೧.೧ ಪ್ರವೇಶ :

### ಗ್ರಾಮೀಣಾಭಿವೃದ್ಧಿಯ ಮಹತ್ವ

ಭಾರತವು ಹಳ್ಳಿಗಳ ದೇಶ ನಮ್ಮ ದೇಶದಲ್ಲಿ ಶೇಕಡ ೭೫ ರಷ್ಟು ಜನಸಂಖ್ಯೆ ಹಳ್ಳಿಗಳಲ್ಲಿ ವಾಸಿಸುತ್ತಾರೆ. ವೇದ ಕಾಲದಿಂದಲೂ ಭಾರತೀಯ ಗ್ರಾಮಗಳ ಕುರಿತು ಚಿಂತನೆ ನಡೆದಿದೆ. ಗ್ರಾಮ ಸಮುದಾಯವು ಸಾಮಾಜಿಕ ರಚನೆಯ ಒಂದು ಭಾಗವಾಗಿದ್ದು ಕುಲ, ಜಾತಿ ಮತ್ತು ರಕ್ತ ಸಂಬಂಧಗಳ ಮಿತಿಗಷ್ಟೇ ಸಿಮೀತವಾಗಿರದೆ ವಿವಿಧ ಜಾತಿ ಕುಟುಂಬಗಳ ಸಮೂಹವಾಗಿದ್ದು, ಎಲ್ಲಾ ಸಮುದಾಯದ ಸದಸ್ಯರು ಸುಖ ದು:ಖಗಳಲ್ಲಿ ಸಹಭಾಗಿಗಳಾಗಿ ಬದುಕುವ ಒಂದು ವ್ಯವಸ್ಥೆಯಾಗಿದೆ.

ಗ್ರಾಮೀಣಾಭಿವೃದ್ಧಿಯ ಮೂಲಕಲ್ಪನೆಯು ತೃತೀಯ ಜಗತ್ತಿನ ರಾಷ್ಟ್ರಗಳಿಗೆ ಹೊಸದೇನಲ್ಲ. ಅಭಿವೃದ್ಧಿ ಹೊಂದುತ್ತಿರುವ ಹಲವು ರಾಷ್ಟ್ರಗಳು ಗ್ರಾಮೀಣಾಭಿವೃದ್ಧಿಗಾಗಿ ಅನೇಕ ಯೋಜನೆಗಳನ್ನು ಜಾರಿಗೆ ತಂದು ಅವುಗಳಿಗೆ ಚೈತನ್ಯ ತುಂಬಲು ಪ್ರಯತ್ನಿಸುತ್ತಿದೆ. ನೈಸರ್ಗಿಕ ಮತ್ತು ಮಾನವ ಸಂಪನ್ಮೂಲಗಳನ್ನು ಸರಿಯಾಗಿ ಬಳಸಿ ಗ್ರಾಮೀಣ ಪ್ರದೇಶಗಳನ್ನು ಸಾಮಾಜಿಕವಾಗಿ ಮತ್ತು ಆರ್ಥಿಕವಾಗಿ ಉತ್ತಮಗೊಳಿಸುವುದೇ ಗ್ರಾಮೀಣಾಭಿವೃದ್ಧಿಯಾಗಿದೆ.

ಭಾರತೀಯ ಗ್ರಾಮೀಣಾ ಸಮುದಾಯವು ಐತಿಹಾಸಿಕ ಕ್ರಾಂತಿಗಳಿಂದ ಸಾಕಷ್ಟು ತೊಂದರೆಗೊಳಗಾದರೂ, ಆಧುನಿಕ ಸೌಕರ್ಯಗಳಿಂದ ವಂಚಿತಗೊಂಡಿದ್ದರೂ, ಶತಮಾನಗಳಿಂದ ವಿದೇಶಿಯರ ಆಡಳಿತ ಪ್ರಭಾವಕ್ಕೆ ಒಳಗಾಗಿದ್ದರೂ, ಸಾಮಾಜಿಕ ನಂಬಿಕೆಗಳು, ವರ್ತನೆಗಳು, ರೂಢಿಗಳು ಮತ್ತು ಗತಕಾಲದ ಸಂಸ್ಕೃತಿ ಸಂಪ್ರದಾಯಗಳು ಗ್ರಾಮ ಸಮಾಜದ ಅವಿಭಾಜ್ಯ ಅಂಗವಾಗಿ ಬೆಳೆದು ನಿಂತಿದೆ.

### ಗ್ರಾಮೀಣ ಬದಲಾವಣೆಗಳು

ಬದಲಾವಣೆಯು ನಿಸರ್ಗದ ನಿಯಮ. ಈ ನಿಯಮವು ಗ್ರಾಮೀಣ ಸಮುದಾಯದ ಸಾಮಾಜಿಕ ಬದುಕಿಗೂ ಅನ್ವಯವಾಗುತ್ತದೆ. ಈ ಮೊದಲು ಗ್ರಾಮೀಣ ಪ್ರದೇಶಗಳು ಚಿಕ್ಕ ಚಿಕ್ಕ

ಗ್ರಾಮಗಳಾಗಿದ್ದು ತನ್ನದೇ ಆದ ಪುಟ್ಟ ಜಗತ್ತನ್ನೇ ನಿರ್ಮಿಸಿಕೊಂಡಿದ್ದವು. ಆದರೆ ಆಧುನಿಕ ಸಮಾಜದಲ್ಲಿ ಇಂತಹ ಸಾಮಾಜಿಕ ತತ್ವಗಳು ಬಹಳಷ್ಟು ವೇಗವಾಗಿ ಬದಲಾವಣೆಯಾಗುತ್ತಿರುವುದು ಕಂಡುಬರುತ್ತದೆ.

ಈ ಬದಲಾವಣೆಯಿಂದ ಗ್ರಾಮೀಣ ಸಮುದಾಯದಲ್ಲಿ ಸಮುದಾಯಿಕ ಪ್ರಜ್ಞೆ ನಿಧಾನವಾಗಿ ಮಾಯವಾಗುತ್ತಿದೆ.

ಭಾರತದ ಸ್ವಾಂತ್ರ್ಯತದ ನಂತರ ಗ್ರಾಮೀಣ ಸಮಾಜದಲ್ಲಿಯೂ ನಗರ ಸಮಾಜದಂತೆ ಸಾಮಾಜಿಕ ಬದಲಾವಣೆ ದಿನದಿಂದ ದಿನಕ್ಕೆ ಹೆಚ್ಚುತ್ತಾ ಹೋಗಿದೆ. ಗ್ರಾಮೀಣ ಸಮಾಜದಲ್ಲಿರುವ ಅರ್ಥಿಕ ವ್ಯವಸ್ಥೆ, ಧರ್ಮ, ಸಂಸ್ಕೃತಿ, ಆದರ್ಶ, ಸಾಮಾಜಿಕ ಸಂಘ ಸಂಸ್ಥೆಗಳು ಇತ್ಯಾದಿಗಳು ನಿರಂತರವಾಗಿ ಬದಲಾವಣೆ ಆಗುತ್ತಿರುವುದು ಕಂಡು ಬರುತ್ತದೆ. ಆದರೆ ಈ ಎಲ್ಲಾ ಕ್ಷೇತ್ರಗಳಲ್ಲಿ ಆಗುವ ಬದಲಾವಣೆ ಒಂದೇ ರೀತಿಯಾಗಿರದೆ ಅದರ ವೇಗ ಮತ್ತು ದಿಶೆಯಲ್ಲಿ ಭಿನ್ನತೆಯನ್ನು ಹೊಂದಿದೆ. ಕೆಲವು ಗ್ರಾಮಗಳು ಅಭಿವೃದ್ಧಿಗೊಂಡರೆ ಇನ್ನು ಕೆಲವು ಗ್ರಾಮಗಳು ಅವನತಿಯತ್ತ ಸಾಗುತ್ತಿರುವುದು ಕಂಡುಬರುತ್ತದೆ.

## ಗ್ರಾಮೀಣ ಸ್ಥಿತಿಗತಿಗಳು

ಭಾರತದಲ್ಲಿನ ಬ್ರಿಟಿಷ್ ಆಡಳಿತ ಕೇವಲ ರಾಜಕೀಯ, ಅರ್ಥಿಕ, ಸಾಮಾಜಿಕ, ಶೈಕ್ಷಣಿಕ ಮತ್ತು ಸಾಂಸ್ಕೃತಿಕ ವಲಯಗಳಲ್ಲಿ ಪರಿಣಾಮವನ್ನು ಬೀರದೆ ಗ್ರಾಮೀಣಾಭಿವೃದ್ಧಿಯ ಮೇಲೂ ಪರಿಣಾಮವನ್ನು ಬೀರಿದೆ. ನಮ್ಮ ದೇಶದ ಗ್ರಾಮೀಣ ಪ್ರದೇಶಗಳು ಇನ್ನೂ ಹಿಂದುಳಿದ ಸ್ಥಿತಿಯಲ್ಲಿ ಮುಂದುವರಿಯುತ್ತಿದೆ. ಗ್ರಾಮೀಣ ಪ್ರದೇಶಗಳಲ್ಲಿ ಅನಕ್ಷರತೆ, ಬಡತನ, ನಿರುದ್ಯೋಗ, ಅನಾರೋಗ್ಯ ಮುಂತಾದ ಸಮಸ್ಯೆಗಳು ಇನ್ನು ನಿರ್ಮೂಲನೆಯನ್ನು ಕಂಡಿಲ್ಲ. ಗ್ರಾಮೀಣ ಪ್ರದೇಶಗಳು ಸರ್ಕಾರದ ಯೋಜನೆಗಳಿಂದ ಮತ್ತು ನೀಡುತ್ತಿರುವ ಸವಲತ್ತುಗಳಿಂದ ವಂಚಿತವಾಗಿದೆ. ಗ್ರಾಮೀಣ ಮಹಿಳೆಯರ ಮತ್ತು ಮಕ್ಕಳ ಸ್ಥಿತಿಗತಿಗಳು ಶೋಚನೀಯವಾಗಿದೆ.

ದೇಶದ ಸಾಮಾಜಿಕ ಮತ್ತು ಅರ್ಥಿಕ ಸಮಸ್ಯೆಗಳು ವ್ಯಾಪಕವೂ ಮತ್ತು ಬಹುಮುಖಿಯೂ ಆಗಿದೆ. ಹೀಗಾಗಿ ಅಂತಹ ಸಮಸ್ಯೆಗಳನ್ನು ಸರ್ಕಾರದ ಆಡಳಿತ ಒಂದೇ ಪರಿಹರಿಸಲು ಸಾಧ್ಯವಿಲ್ಲ. ಒಂದು ಉತ್ತಮ ಮತ್ತು ಸ್ವಾವಲಂಬಿ ಸಮಾಜದ ಸ್ಥಾಪನೆಗಾಗಿ ಸರ್ಕಾರದ ಮೇಲಿನ ಜನರ ಅವಲಂಬನೆಯನ್ನು ಕಡಿಮೆಗೊಳಿಸಬೇಕು, ಜನರು ಸ್ವಾವಲಂಬಿಯಾಗಿ ಜೀವಿಸಲು ಸಮರ್ಥರಾಗಬೇಕು.

ಈ ನಿಟ್ಟಿನಲ್ಲಿ, ಜನರಲ್ಲಿ ಸ್ವಾವಲಂಬನೆಯನ್ನು ಮೂಡಿಸುವಲ್ಲಿ ಸರ್ಕಾರೇತರ ಸಂಸ್ಥೆಗಳು ಪ್ರಮುಖ ಪಾತ್ರವಹಿಸುತ್ತದೆ.

## ಸರ್ಕಾರೇತರ ಸಂಸ್ಥೆಗಳು ಮತ್ತು ಗ್ರಾಮೀಣಾಭಿವೃದ್ಧಿ

### ಸರ್ಕಾರೇತರ ಸಂಸ್ಥೆಗಳು ಎಂದರೇನು?

ಸರ್ಕಾರೇತರ ಸಂಸ್ಥೆಗಳು ಎಂದರೆ ವೇತನವನ್ನು ಪಡೆಯದೆ ಅಥವಾ ಪಡೆದು ಸಾರ್ವಜನಿಕ ಸಮುದಾಯದ ಅಭಿವೃದ್ಧಿ ಕೆಲಸವನ್ನು ತಾವೇ ಆರಂಭಿಸಿ, ನಿರ್ವಹಿಸಿ ಯಾವುದೇ ಹೊರಗಿನ ನಿರ್ಬಂಧವಿಲ್ಲದೆ ಕೆಲಸಮಾಡುವ ಗುಂಪನ್ನೇ ಸರ್ಕಾರೇತರ ಸಂಸ್ಥೆಗಳು ಎಂದು ಕರೆಯಲಾಗುತ್ತದೆ. ಇದರಲ್ಲಿ ಕೆಲಸ ಮಾಡುವವರು ಸಮುದಾಯ ಅಭಿವೃದ್ಧಿ ವಿಷಯಗಳಲ್ಲಿ ತರಬೇತಿಯನ್ನು ಹೊಂದಿದ ಮತ್ತು ಜನರಲ್ಲಿ ನಿಕಟ ಸಂಬಂಧವನ್ನು ಹೊಂದಿದವರಾಗಿರುತ್ತಾರೆ. ಇವರು ಸ್ಥಳೀಯ ಜನರ ಅವಶ್ಯಕತೆ ಅವರ ಆರ್ಥಿಕತೆ, ಸಾಮಾಜಿಕ ಸ್ಥಿತಿಗತಿಗಳನ್ನು ನೇರವಾಗಿ ತಿಳಿದಿರುತ್ತಾರೆ ಮತ್ತು ಅವರು ಸ್ಥಳೀಯ ನೈಸರ್ಗಿಕ ಸಂಪತ್ತನ್ನು ಬಳಸಿಕೊಂಡು ಸಮುದಾಯದ ಅಭಿವೃದ್ಧಿಯನ್ನು ಹೇಗೆ ಮಾಡಬಹುದು ಎಂಬ ಮಾಹಿತಿಯನ್ನು ನೀಡುತ್ತಾರೆ. ಗ್ರಾಮೀಣ ಜನರ ಮೂಲ ಸೌಕರ್ಯಗಳನ್ನು ಅಭಿವೃದ್ಧಿ ಮಾಡುವ ದೃಷ್ಟಿಯಲ್ಲಿ ಕಾರ್ಯ ನಿರ್ವಹಿಸುತ್ತಾರೆ.

ಕಳೆದ ಮೂರು ದಶಕಗಳಿಂದ ಗ್ರಾಮೀಣಾಭಿವೃದ್ಧಿಯಲ್ಲಿ ಸರ್ಕಾರೇತರ ಸಂಸ್ಥೆಗಳು ಪ್ರಮುಖ ಪಾತ್ರವಹಿಸುತ್ತಿದೆ. ಸರ್ಕಾರೇತರ ಸಂಸ್ಥೆಗಳನ್ನು ಲಾಭರಹಿತವಾದ ಸಂಸ್ಥೆಗಳೆಂದು ಕರೆಯುತ್ತಾರೆ. ಈ ಸಂಸ್ಥೆಗಳು ಜನತೆಯ ಪ್ರಯತ್ನದಿಂದ ಜನರಿಗೆ ಉತ್ತಮ ಸೇವೆ ಮತ್ತು ಸೌಲಭ್ಯಗಳನ್ನು ಒದಗಿಸಲು ರೂಪಿತಗೊಂಡತಹ ಸಂಸ್ಥೆಗಳಾಗಿದೆ.

ವಿಶ್ವ ಬ್ಯಾಂಕಿನ ಪ್ರಕಾರ " ಸರ್ಕಾರೇತರ ಸಂಸ್ಥೆಗಳು ಖಾಸಗಿ ಸಂಸ್ಥೆಗಳಾಗಿದ್ದು ಬಡವರ ಏಳಿಗೆ, ಪರಿಸರ ರಕ್ಷಣೆ ಮತ್ತು ಸಮೂದಾಯ ಅಭಿವೃದ್ಧಿಯ ನಿಲುವನ್ನು ಹೊಂದಿದೆ ".

ಭಾರತದಲ್ಲಿ ೧೯೭೦ ರ ದಶಕದಲ್ಲಿ ಅನೇಕ ಸರ್ಕಾರೇತರ ಸಂಸ್ಥೆಗಳು ಸ್ಥಾಪಿತಗೊಂಡಿದೆ. ಸರ್ಕಾರೇತರ ಸಂಸ್ಥೆಗಳು ಮಾರುಕಟ್ಟೆ ಮತ್ತು ಸರ್ಕಾರದ ಹೊರಗಿದ್ದು ದೇಶದ ಸಾಮಾಜಿಕ ಮತ್ತು ಆರ್ಥಿಕ ಅಭಿವೃದ್ಧಿಯಲ್ಲಿ ಮಹತ್ವವಾದ ಪಾತ್ರವಹಿಸುತ್ತದೆ. ಈ ಸಂಸ್ಥೆಗಳು ಆರ್ಥಿಕ, ಸಾಮಾಜಿಕ, ಸಾಂಸ್ಕೃತಿಕ ಮತ್ತು ವೈಜ್ಞಾನಿಕ ಕ್ಷೇತ್ರಗಳಲ್ಲಿ ತಮ್ಮನ್ನು ತಾವು ತೊಡಗಿಸಿಕೊಂಡಿವೆ. ಸರ್ಕಾರೇತರ ಸಂಸ್ಥೆಗಳು ಉತ್ತಮ ಶಿಕ್ಷಣದ ಪೂರೈಕೆ, ಆರೋಗ್ಯ ಸೇವೆ, ಸ–ಉದ್ಯೋಗ ಸೃಷ್ಟಿ, ಹಣಕಾಸಿನ ಸಾಲವನ್ನು ನೀಡುವುದು ಮತ್ತು ಅದನ್ನು ಸರಿಯಾದ ರೀತಿಯಲ್ಲಿ ಪೂರೈಸಲು ಶ್ರಮಿಸುತ್ತಿವೆ.

ಸರ್ಕಾರೇತರ ಸಂಸ್ಥೆಗಳು ವಿಸ್ತೃತವಾದ ಉಚ್ಛ ರಾಷ್ಟ್ರೀಯ ಹಿತಾಸಕ್ತಿ, ಆಡಳಿತ, ಕಾಯಿದೆ ಕಾನೂನುಗಳ ಬಗ್ಗೆ ಪ್ರಜ್ಞೆ ಮೂಡಿಸುವುದು, ಸಮಾಜದ ಕೆಲವು ವರ್ಗಗಳ ಮೂಲಭೂತ ಅಗತ್ಯಗಳನ್ನು ಪೂರೈಸುವುದು ಮುಂತಾದ ಸಾಮಾಜಿಕ ಕಾರ್ಯಗಳಲ್ಲಿ ತೊಡಗಿಸಿಕೊಂಡು ಉತ್ತಮ ಸೇವೆಯನ್ನು ಜನರಿಗೆ ನೀಡುತ್ತಿವೆ.

ಭಾರತದಲ್ಲಿ ಕೈಗೊಳ್ಳಲಾದ PRIA ಸಮೀಕ್ಷೆಯ ಪ್ರಕಾರ ಸುಮಾರು ೧೨ ಲಕ್ಷ ಸರ್ಕಾರೇತರ ಸಂಸ್ಥೆಗಳಿವೆ. ಇವುಗಳಲ್ಲಿ ಸುಮಾರು ೬ ಲಕ್ಷದಷ್ಟು ಸಂಸ್ಥೆಗಳು ಗ್ರಾಮೀಣ ಪ್ರದೇಶದಲ್ಲಿ ಸ್ಥಾಪಿತಗೊಂಡು ಗ್ರಾಮೀಣಾಭಿವೃದ್ಧಿಯನ್ನು ಸಾಧಿಸುತ್ತಿವೆ. ಸಾಮಾಜಿಕ ಬದಲಾವಣೆಗಾಗಿ ಅನೇಕ ಪ್ರಗತಿಪರ ಆಂದೋಲನಗಳನ್ನು ನಾಗರೀಕ ಸ್ವಾತಂತ್ರ್ಯ ಮತ್ತು ಭ್ರಷ್ಟಚಾರ ನಿರ್ಮೂಲನ ಕಾರ್ಯಕ್ರಮಗಳನ್ನು ಕೈಗೊಳ್ಳುತ್ತಿದೆ.

ಮಹಾತ್ಮಾ ಗಾಂಧೀಜಿಯವರ ಪ್ರಕಾರ "ಹಳ್ಳಿಯ ಜೀವನ ಸಂಸ್ಕೃತಿಯ ಪುನರುತ್ಥಾನವೇ ನಿಜವಾದ ಸ್ವರಾಜ್ಯ", ಭಾರತದ ಜೀವಾಳ ಕೃತಕ ನಗರ ಸಂಸ್ಕೃತಿಯಿಂದ ಎಂದೂ ಪೋಷಿತವಾಗದು, ಆದರೆ ಅಸಂಖ್ಯಾತ ಹಳ್ಳಿಗಳಲ್ಲಿ ಪಸರಿಸಿ ನಿಲ್ಲುವಂತಹ ವಿಕೇಂದ್ರಿತ, ವಿಜ್ಞಾನಾಧಾರಿತ, ವಿಶ್ವಾಸ ವರ್ಧಕ ಗ್ರಾಮ ಸ್ವರಾಜ್ಯ ಸ್ಥಾಪನೆಯಿಂದ ಮಾತ್ರ ಸಾಧ್ಯ"

ಕಾಲಾನುಕ್ರಮದಲ್ಲಿ ಈ ಸಂಸ್ಥೆಗಳ ಪಾತ್ರವು ಸಂಪೂರ್ಣವಾಗಿ ಬದಲಾಗಿದೆ. ಸರ್ಕಾರೇತರ ಸಂಸ್ಥೆಗಳು ಅಭಿವೃದ್ಧಿ ಮತ್ತು ಬದಲಾವಣೆಯ ಮೇಲೆ ತಮ್ಮ ಗಮನವನ್ನು ಕೇಂದ್ರಿಕರಿಸಿದೆ. ಕೆಲವು ದೃಷ್ಟಿಗಳಿಂದ ಸರ್ಕಾರೇತರ ಸಂಸ್ಥೆಗಳು, ಸರ್ಕಾರದ ಸಂಸ್ಥೆಗಳಿಗಿಂತ ಹೆಚ್ಚು ಪ್ರಯೋಜನಕಾರಿಯಾಗಿವೆ. ಆದುದರಿಂದ ಗ್ರಾಮೀಣಾಭಿವೃದ್ಧಿಯೆಂಬ ಅಭೂತಪೂರ್ವವಾದ ಕ್ರಿಯೆಯನ್ನು ಪೂರೈಸಲು ಬೇಕಾದ ಸೂಕ್ತ ವಾತವರಣವನ್ನು ನಮ್ಮ ಸರ್ಕಾರವು ಸರ್ಕಾರೇತರ ಸಂಸ್ಥೆಗಳಿಗೆ ಒದಗಿಸಿಕೊಡಬೇಕಾಗಿದೆ.

## ಸರ್ಕಾರೇತರ ಸಂಸ್ಥೆಗಳ ಚಟುವಟಿಕೆಗಳು

ಭಾರತದಲ್ಲಿ ಗ್ರಾಮೀಣಾಭಿವೃದ್ಧಿಯಲ್ಲಿ ತೊಡಗಿರುವ ಬಹುತೇಕ ಸರ್ಕಾರೇತರ ಸಂಸ್ಥೆಗಳು ಗಾಂಧೀವಾದ ಮತ್ತು ಕ್ರೈಸ್ತ ಧರ್ಮದಿಂದ ಪ್ರಭಾವಿತವಾಗಿದೆ (ಐ ಸತ್ಯಂ ಸುದರಂ, Rural Development 2002 2nd edn pp 517) ಭಾರತದಲ್ಲಿ ಗ್ರಾಮೀಣಾಭಿವೃದ್ಧಿಯಲ್ಲಿ ತೊಡಗಿರುವ ಸರ್ಕಾರೇತರ ಸಂಸ್ಥೆಗಳ ಚಟುವಟಿಕೆಗಳನ್ನು ನಾಲ್ಕು ವಿಭಾಗಗಳಾಗಿ ವಿಂಗಡಿಸಬಹುದು.

- ಸರಳವಾಗಿ ದಾನ ಧರ್ಮ ಮಾಡುವುದು, ಸರ್ಕಾರದ ಕಲ್ಯಾಣ ಚಟುವಟಿಕೆಗಳಿಗೆ ಪೂರಕವಾಗಿ ಕಾರ್ಯಾಚರಿಸುವುದು.
- ಭಾರತ ಸರಕಾರ ಮತ್ತು ರಾಜ್ಯ ಸರಕಾರಗಳು, ಜಿಲ್ಲಾ ಪಂಚಾಯತ್‌ಗಳು ಜಾರಿಗೊಳಿಸುವ ಗ್ರಾಮೀಣಾಭಿವೃದ್ಧಿ ಕಾರ್ಯಗಳನ್ನು ಇಡೀ ಹಳ್ಳಿ ಅಥವಾ ಗ್ರಾಮೀಣ ಸಮುದಾಯದ ಅನುಕೂಲಕ್ಕಾಗಿ ವ್ಯಾಪಕ ನೆಲೆಯಲ್ಲಿ ಜಾರಿಗೊಳಿಸುವುದು, ಅದಲ್ಲದೆ ಜನರ ಪಾಲ್ಗೊಳ್ಳುವಿಕೆಯನ್ನು ಉತ್ತೇಜಿಸುವುದು.

- ಜನರಲ್ಲಿ ಅರಿವು ಮೂಡಿಸಿ ಅವರನ್ನು ಸಂಘಟಿತರನ್ನಾಗಿ ಮಾಡಿ, ತಮಗೆ ಪ್ರಯೋಜನಕಾರಿಯಾದ ಅಭಿವೃದ್ಧಿ ಕಾರ್ಯಕ್ರಮಗಳಿಗೆ ಬೇಡಿಕೆ ಸಲ್ಲಿಸಿ, ಅವುಗಳ ಯೋಜನೆ ಮತ್ತು ಅನುಷ್ಠಾನವನ್ನು ಕೈಗೆತ್ತಿಕೊಳ್ಳಲು ಸಾಧ್ಯವಾಗುವಂತೆ ಅವರನ್ನು ಸಮರ್ಥರನ್ನಾಗಿಸುವುದು.
- ಜನತೆಯನ್ನು ಗ್ರಾಮೀಣಾಭಿವೃದ್ಧಿ ಯೋಜನೆ ಸಂಪನ್ಮೂಲ ಸಂಗ್ರಹ ಗ್ರಾಮೀಣಾ ಬುಡಕಟ್ಟು ಜನರ ಅಭಿವೃದ್ಧಿ ಕಾರ್ಯಕ್ರಮಗಳ ಜಾರಿ, ಗ್ರಾಮೀಣಾಭಿವೃದ್ಧಿ ಕಾರ್ಯಕ್ರಮಗಳ ನಿರೂಪಣೆ ಯೋಜನೆ ವಿನ್ಯಾಸ, ಪರ್ಯಾಯ ಕಾರ್ಯವ್ಯೂಹಗಳ ನಿರೂಪಣೆ ಜಾರಿ ಇತ್ಯಾದಿ ಕಾರ್ಯಗಳಲ್ಲಿ ಗ್ರಾಮೀಣ ಜನತೆ ಪಾಲ್ಗೊಳ್ಳುವಂತೆ ಮಾಡುವುದು.

## ೧.೨ ಅಧ್ಯಯನಕ್ಕೆ ಮೂಲವಾಗಿರುವ ಸಮಸ್ಯೆಗಳು

ನಮ್ಮ ಸರ್ಕಾರವು ಗ್ರಾಮೀಣಾಭಿವೃದ್ಧಿಗಾಗಿ ಅನೇಕ ರೀತಿಯ ಯೋಜನೆಗಳನ್ನು ಜಾರಿಗೆ ತಂದರೂ ಅದು ಸರಿಯಾದ ರೀತಿಯಲ್ಲಿ ಅನುಷ್ಠಾನಕ್ಕೆ ಬರಲು ಸಾಧ್ಯವಾಗಿಲ್ಲ. ಗ್ರಾಮಗಳು ಸಾಮಾಜಿಕವಾಗಿ, ನೈತಿಕವಾಗಿ ಮತ್ತು ಸಾಂಸ್ಕೃತಿಕವಾಗಿ ವಿಭಜನೆಗೊಂಡು ಕುಸಿದುಹೋಗುತ್ತಿವೆ. ಗ್ರಾಮೀಣ ಪ್ರದೇಶದಲ್ಲಿ ಸರಿಯಾದ ರೀತಿಯ ಶಿಕ್ಷಣ ಮತ್ತು ಮೂಲಭೂತ ಸೌಲಭ್ಯಗಳು ಪೂರೈಕೆಯಾಗುತ್ತಿಲ್ಲ. ಗ್ರಾಮೀಣ ಪ್ರದೇಶದ ಜನರು ಬಂಡವಾಳ ಮತ್ತು ಉತ್ತಮ ನಾಯಕತ್ವದ ಕೊರತೆ, ಆರೋಗ್ಯ ಮತ್ತು ಉತ್ತಮ ಸೌಲಭ್ಯಗಳ ತೊಂದರೆಯಿಂದಾಗಿ ಅನೇಕ ಸಮಸ್ಯೆಗಳನ್ನು ಎದುರಿಸುತ್ತಿದ್ದಾರೆ.

ಸರ್ಕಾರದ ಯೋಜನೆಗಳು ಸರಿಯಾದ ರೀತಿಯಲ್ಲಿ ಕಾರ್ಯವನ್ನು ನಿರ್ವಹಿಸುತ್ತಿಲ್ಲ. ಗ್ರಾಮೀಣಾಭಿವೃದ್ಧಿಯ ವಿಕೇಂದ್ರಿಕರಣವು ಪೂರ್ಣ ಪ್ರಮಾಣದಲ್ಲಿ ನಡೆಯುತ್ತಿಲ್ಲ. ಸರ್ಕಾರೇತರ

ಸಂಸ್ಥೆಗಳು ಮತ್ತು ಇತರ ಸಂಘ ಸಂಸ್ಥೆಗಳು ಗ್ರಾಮೀಣ ಅಭಿವೃದ್ಧಿಯಲ್ಲಿ ತೊಡಗಿದ್ದರೂ ಜನರ ಬೇಕು ಬೇಡಗಳನ್ನು ಸರಿಯಾದ ರೀತಿಯಲ್ಲಿ ಪೂರೈಸಲು ಸಾಧ್ಯವಾಗುತ್ತಿಲ್ಲ. ಗ್ರಾಮೀಣ ಪ್ರದೇಶದಲ್ಲಿರುವ ಅನಕ್ಷರತೆ ಮತ್ತು ಮೂಢನಂಬಿಕೆಗಳು ಜನರಿಗೆ ತಮ್ಮ ಹಕ್ಕುಗಳ ಬಗ್ಗೆ ತಿಳಿಯಲು ಅವಕಾಶವನ್ನು ನೀಡುತ್ತಿಲ್ಲ. ಗ್ರಾಮೀಣ ಪ್ರದೇಶದ ಕೃಷಿ ಮತ್ತು ಇನ್ನಿತರ ಚಟುವಟಿಕೆಗಳು ಪುರಾತನ ತಂತ್ರಜ್ಞಾನಗಳನ್ನು ಬಳಸುತ್ತಿವೆ. ಹೊಸ ತಂತ್ರಜ್ಞಾನಗಳು ಮತ್ತು ಉತ್ತಮ ಮಾರುಕಟ್ಟೆಗಳ ವ್ಯವಸ್ಥೆಯಿಲ್ಲದೆ ಜನರು ಸಂಕಷ್ಟದ ಜೀವನವನ್ನು ನಡೆಸುತ್ತಿದ್ದಾರೆ.

ಗ್ರಾಮೀಣ ಪ್ರದೇಶದ ಜನರು ಬಡತನ ಮತ್ತು ನಿರುದ್ಯೋಗದ ಸಮಸ್ಯೆಗಳನ್ನು ಎದುರಿಸುತ್ತಿದ್ದಾರೆ. ಗ್ರಾಮೀಣ ಜನರಿಗೆ ಸರಿಯಾದ ಉದ್ಯೋಗ ದೊರಕದೆ ನಗರ ಪ್ರದೇಶಗಳಿಗೆ ವಲಸೆ ಹೋಗುತ್ತಿದ್ದಾರೆ. ಸರ್ಕಾರದ ಅನೇಕ ಸ್ವ-ಉದ್ಯೋಗ ಯೋಜನೆಗಳು ಜಾರಿಗೆ ಬಂದಿದ್ದರೂ ಸಮಾನ ರೀತಿಯ ಉದ್ಯೋಗಗಳು ಹಂಚಿಕೆಯಾಗಿಲ್ಲ. ಉದ್ಯೋಗದ ಕೊರತೆಯಿಂದಾಗಿ ಜನರ ಜೀವನ ಮಟ್ಟವು ಕುಸಿದಿದೆ. ಅನೇಕ ಸೇವಾ ಸಂಘಟನೆಗಳು ಮತ್ತು ಸರ್ಕಾರೇತರ ಸಂಸ್ಥೆಗಳು ಸ್ಥಾಪನೆಗೊಂಡಿದ್ದರೂ ಜನರು ಸರಿಯಾದ ರೀತಿಯಲ್ಲಿ ಅದರ ಲಾಭವನ್ನು ಪಡೆಯಲು ಸಾಧ್ಯವಾಗುತ್ತಿಲ್ಲ. ಆದುದರಿಂದ ಗ್ರಾಮೀಣ ಪ್ರದೇಶದ ಸಮಸ್ಯೆಗಳ ಬಗ್ಗೆ ಮತ್ತು ಸರ್ಕಾರೇತರ ಸಂಸ್ಥೆಗಳ ಕಾರ್ಯಗಳ ಬಗ್ಗೆ ಒಂದು ಅರಿವನ್ನು ಮೂಡಿಸಲು ಈ ಸಂಶೋಧನಾ ಪ್ರಬಂಧವು ಅಗತ್ಯವಾಗಿದೆ.

ಗ್ರಾಮೀಣ ಪ್ರದೇಶದ ಜನರು ಬಡತನ ಮತ್ತು ನಿರುದ್ಯೋಗದ ಸಮಸ್ಯೆಗಳನ್ನು ಪರಿಹರಿಸಲು ಸರಕಾರ ಅನೇಕ ಗ್ರಾಮೀಣ ಅಭಿವೃದ್ಧಿ ಮತ್ತು ಸ್ವ-ಉದ್ಯೋಗಗಳ ಸೃಷ್ಟಿ ಯೋಜನೆಗಳನ್ನು ಹಾಕಿಕೊಂಡರೂ ದಿನೇ ದಿನೇ ಗ್ರಾಮೀಣ ಪ್ರದೇಶಗಳಲ್ಲಿ ಬಡತನ ಮತ್ತು ನಿರುದ್ಯೋಗದ ಸಮಸ್ಯೆಗಳು ಹೆಚ್ಚಾಗುತ್ತಿರುವುದು ಅಂಕಿ ಅಂಶಗಳಿಂದ ತಿಳಿದುಬರುತ್ತದೆ.

ಸರಕಾರದ ಹಲವಾರು ಕಾರ್ಯಕ್ರಮಗಳ ಜೊತೆಗೆ ಖಾಸಗಿ ಮತ್ತು ಸರ್ಕಾರೇತರ ಸಂಸ್ಥೆಗಳು ಅನೇಕ ರೀತಿಯಲ್ಲಿ ಗ್ರಾಮೀಣ ಅಭಿವೃದ್ಧಿಗೆ ಸ್ಪಂದಿಸುತ್ತಿವೆ. ಪ್ರಸ್ತುತ ಅಧ್ಯಯನದಲ್ಲಿ ಸರ್ಕಾರೇತರ ಸಂಸ್ಥೆಗಳು ಗ್ರಾಮೀಣ ಅಭಿವೃದ್ಧಿಯ ಬಗ್ಗೆ ಯಾವ ಯಾವ ಕಾರ್ಯಕ್ರಮಗಳನ್ನು ಹಮ್ಮಿಕೊಂಡಿವೆ?, ಯಾವ ರೀತಿಯಲ್ಲಿ ಕಾರ್ಯಕ್ರಮಗಳನ್ನು ಅನುಷ್ಠಾನಗೊಳಿಸುತ್ತಿವೆ?, ಹಣಕಾಸಿನ ಮೂಲಗಳೇನು?, ಅದರ ಫಲಾನುಭವಿಗಳು ಯಾರು?, ಈ ಸಂಸ್ಥೆಗಳ ಕಾರ್ಯಯೋಜನೆಗಳು ಎಷ್ಟರ ಮಟ್ಟಿಗೆ ಯಶಸ್ವಿಯಾಗಿವೆ?, ಒಂದು ವೇಳೆ ಯಶಸ್ವಿಯಾಗದೇ ಇದ್ದಲ್ಲಿ ಕಾರಣಗಳೇನು? ಇವುಗಳ ಮೇಲೆ ಬೆಳಕು ಚೆಲ್ಲುವ ಪ್ರಯತ್ನವನ್ನು ಮಾಡಲಾಗಿದೆ.

ಸರ್ಕಾರೇತರ ಸಂಸ್ಥೆಗಳು ಸ್ವ-ಉದ್ಯೋಗವಕಾಶಗಳನ್ನು ಸೃಷ್ಟಿಸುವಲ್ಲಿ ಯಾವ ರೀತಿಯ ಪಾತ್ರಗಳನ್ನು ವಹಿಸಿವೆ, ಗ್ರಾಮೀಣ ಪ್ರದೇಶಗಳಲ್ಲಿ ಶಿಕ್ಷಣ, ಕೃಷಿ ಮತ್ತು ಮಹಿಳೆಯರ ಅಭಿವೃದ್ಧಿಗೆ ಸರ್ಕಾರೇತರ ಸಂಸ್ಥೆಗಳು ನೀಡಿರುವ ಕೊಡುಗೆ, ಮುಂತಾದ ವಿಷಯಗಳ ಬಗ್ಗೆ ಅಧ್ಯಯನವನ್ನು ಕೈಗೊಳ್ಳುವ ಅವಶ್ಯಕತೆಯಿದೆ.

## ೧.೩ ಅಧ್ಯಯನದ ಉದ್ದೇಶಗಳು

೧. ದಕ್ಷಿಣ ಕನ್ನಡ ಜಿಲ್ಲೆಯ ಗ್ರಾಮೀಣ ಪ್ರದೇಶಗಳಲ್ಲಿನ ಸರ್ಕಾರೇತರ ಸಂಸ್ಥೆಗಳ ಸ್ಥಿತಿಗತಿಗಳ ಬಗ್ಗೆ ಅಧ್ಯಯನವನ್ನು ಮಾಡುವುದು.

೨. ಸರ್ಕಾರೇತರ ಸಂಸ್ಥೆಗಳ ಫಲಾನುಭವಿಗಳ ಸಾಮಾಜಿಕ ಮತ್ತು ಆರ್ಥಿಕ ಸ್ಥಿತಿಗತಿಗಳ ಬದಲಾವಣೆಯ ಬಗ್ಗೆ ವಿಶ್ಲೇಷಣೆ.

೩. ಸ್ವ-ಉದ್ಯೋಗವಕಾಶಗಳನ್ನು ಸೃಷ್ಟಿಸುವಲ್ಲಿ ಸರ್ಕಾರೇತರ ಸಂಸ್ಥೆಗಳ ಪಾತ್ರದ ಬಗ್ಗೆ ಅಧ್ಯಯನ.

೪. ಗ್ರಾಮೀಣ ಪ್ರದೇಶದಲ್ಲಿ ಶಿಕ್ಷಣ, ಕೃಷಿ, ಮಹಿಳೆಯರ ಸ್ಥಿತಿಗತಿಗಳ ಬದಲಾವಣೆಗಳಲ್ಲಿ ಸರ್ಕಾರೇತರ ಸಂಸ್ಥೆಗಳು ನಿರ್ವಹಿಸುತ್ತಿರುವ ಪಾತ್ರದ ಕುರಿತು ಅಧ್ಯಯನ.

## ೧.೪ ಅಧ್ಯಯನದ ಊಹೆಗಳು

೧. ಗ್ರಾಮೀಣಾಭಿವೃದ್ಧಿಯನ್ನು ಸಾಧಿಸಲು ನಮ್ಮ ಸರ್ಕಾರ ಅನೇಕ ಯೋಜನೆ ಮತ್ತು ಕಾರ್ಯಕ್ರಮಗಳನ್ನು ರೂಪಿಸಿದೆ.

೨. ಗ್ರಾಮೀಣಾಭಿವೃದ್ಧಿಯಲ್ಲಿ ಸರ್ಕಾರೇತರ ಸಂಸ್ಥೆಗಳು ಮಹತ್ವವಾದ ಪಾತ್ರವಹಿಸುತ್ತಿವೆ.

೩. ಜನರು ಸರ್ಕಾರೇತರ ಸಂಸ್ಥೆಗಳ ಕಾರ್ಯಕ್ರಮಗಳಲ್ಲಿ ಸಕ್ರಿಯವಾಗಿ ಭಾಗವಹಿಸುತ್ತಿಲ್ಲ

೪. ಗ್ರಾಮೀಣ ಪ್ರದೇಶದ ಜನರ ಅರ್ಥಿಕ ಮತ್ತು ಸಾಮಾಜಿಕ ಪರಿಸ್ಥಿತಿ ಇನ್ನೂ ಹಿಂದುಳಿದಿದೆ.

## ೧.೫ ಅಧ್ಯಯನದ ವಿಧಾನಗಳು

೧. ಈ ಅಧ್ಯಯನವು ಪ್ರಾಥಮಿಕ ಮತ್ತು ಅನುಷಂಗಿಕ ಮೂಲಗಳೆರಡನ್ನೂ ಒಳಗೊಂಡಿದೆ.

೨. ಈ ಅಧ್ಯಯನಕ್ಕೆ ಸೈದ್ಧಾಂತಿಕ ನೆಲೆಯನ್ನು ಒದಗಿಸಲು ವಿವಿಧ ಗ್ರಂಥಗಳು, ಸಂಶೋಧನಾ ಲೇಖನಗಳು ಮತ್ತು ಸರಕಾರಿ ದಾಖಲೆಗಳ ಪರಾಮರ್ಶೆಯನ್ನು ಒಳಗೊಂಡಿದೆ.

೩. ಸರ್ಕಾರೇತರ ಸಂಸ್ಥೆಗಳ ಫಲಾನುಭವಿಗಳನ್ನು ಭೇಟಿಮಾಡಿ ಸಂದರ್ಶನದ ಮೂಲಕ ಮತ್ತು ಪ್ರಶ್ನಾವಳಿಗಳ ಮೂಲಕ ಅದರ ಯೋಜನೆ ಮತ್ತು ಉಪಯೋಗಗಳ ಬಗ್ಗೆ ಮಾಹಿತಿಗಳನ್ನು ಸಂಗ್ರಹಿಸುವುದು.

೪. ಸರ್ಕಾರೇತರ ಸಂಸ್ಥೆಗಳು ಗ್ರಾಮೀಣ ಪ್ರದೇಶಗಳಲ್ಲಿ ನಿರ್ವಹಿಸುತ್ತಿರುವ ಪಾತ್ರಗಳ ಬಗ್ಗೆ ಅನೌಪಚಾರಿಕವಾಗಿ ಗ್ರಾಮೀಣ ಪ್ರದೇಶದ ಜನರಿಂದ ಮಾಹಿತಿಗಳನ್ನು ಪಡೆದುಕೊಳ್ಳುವುದು.

ಹೀಗೆ ಸಂಗ್ರಹಿಸಿದ ಮಾಹಿತಿಯನ್ನು ಸೂಕ್ತ ಕೋಷ್ಟಕಗಳನ್ನಾಗಿ ವಿಂಗಡಿಸಿ, ಸರಳ ಅಂಕಿ ಅಂಶಗಳಾದ ಅನುಪಾತ, ಸರಾಸರಿ ಪ್ರಮಾಣ ಮತ್ತು ಶೇಕಡವಾರು ಪ್ರಮಾಣದ ಮೂಲಕ ವಿಶ್ಲೇಷಿಸಿ ಅರ್ಥೈಸಲಾಗುವುದು.

## ೧.೬ ಅಧ್ಯಯನದ ಪ್ರಾಮುಖ್ಯತೆ

ಗ್ರಾಮೀಣ ಪ್ರದೇಶಗಳು ಅಭಿವೃದ್ಧಿ ಹೊಂದಿದರೆ ನಮ್ಮ ದೇಶವು ತನ್ನಿಂದ ತಾನೇ ಅಭಿವೃದ್ಧಿಯನ್ನು ಹೊಂದುತ್ತದೆ. ಈ ನಿಟ್ಟಿನಲ್ಲಿ ಸರ್ಕಾರೇತರ ಸಂಸ್ಥೆಗಳು ಗ್ರಾಮೀಣ ಅಭಿವೃದ್ಧಿಯನ್ನು ಸಾಧಿಸುವಲ್ಲಿ ಪ್ರಮುಖ ಪಾತ್ರವಹಿಸುತ್ತವೆ. ಸರಕಾರವು ರೂಪಿಸಿದಂತಹ ಯೋಜನೆಗಳು ಸರಿಯಾದ ರೀತಿಯಲ್ಲಿ ಗ್ರಾಮೀಣ ಪ್ರದೇಶದ ಜನರಿಗೆ ತಲುಪುತ್ತಿಲ್ಲ. ಜನರು ಇನ್ನೂ ಬಡತನ, ನಿರುದ್ಯೋಗ ಮುಂತಾದ ಸಮಸ್ಯೆಗಳಿಂದ ಬಳಲುತ್ತಿದ್ದಾರೆ. ಇಂತಹ ಸಮಸ್ಯೆಗಳನ್ನು ಒಂದು ಪರಿಣಾಮಕಾರಿ ರೀತಿಯಲ್ಲಿ ಹೋಗಲಾಡಿಸಲು ಸರ್ಕಾರೇತರ ಸಂಸ್ಥೆಗಳು ಶ್ರಮಿಸುತ್ತಿವೆ.

ಪ್ರಸ್ತುತ ಅಧ್ಯಯನದಲ್ಲಿ ದಕ್ಷಿಣಕನ್ನಡ ಜಿಲ್ಲೆಯ ಗ್ರಾಮೀಣ ಪ್ರದೇಶಗಳು ಮತ್ತು ಸರ್ಕಾರೇತರ ಸಂಸ್ಥೆಗಳ ಸ್ಥಿತಿಗತಿಗಳ ಬಗ್ಗೆ ಒಂದು ಅಧ್ಯಯನವನ್ನು ನಡೆಸಲಾಗಿದೆ. ಸರ್ಕಾರೇತರ ಸಂಸ್ಥೆಗಳು ಬಹುತೇಕ ಸಂಧರ್ಭಗಳಲ್ಲಿ ಸರಕಾರದ ಸಂಸ್ಥೆಗಳಿಗಿಂತ ಹೆಚ್ಚು ಪರಿಣಾಮಕಾರಿಯಾಗಿ ಕಾರ್ಯನಿರ್ವಹಿಸುತ್ತವೆ. ಗ್ರಾಮೀಣ ಅಭಿವೃದ್ಧಿಯನ್ನು ಸಾಧಿಸಲು ಸರ್ಕಾರೇತರ ಸಂಸ್ಥೆಗಳು ಅನೇಕ ಗ್ರಾಮೀಣ ಅಭಿವೃದ್ಧಿ ಯೋಜನೆಗಳನ್ನು ಜಾರಿಗೆ ತಂದು ಅದನ್ನು ಸರಿಯಾದ ರೀತಿಯಲ್ಲಿ ಅನುಷ್ಠಾನಗೊಳಸಲು ಶ್ರಮಿಸುತ್ತಿವೆ. ಜನರ ನಿರುದ್ಯೋಗ ಸಮಸ್ಯೆಗಳನ್ನು ಹೋಗಲಾಡಿಸಲು ಅನೇಕ ಸ್ವ-ಉದ್ಯೋಗ ಕಾರ್ಯಕ್ರಮಗಳನ್ನು ರೂಪಿಸಿ ಜನರು ಬಡತನ, ನಿರುದ್ಯೋಗ ಮುಂತಾದ ಸಮಸ್ಯೆಗಳ ಬೇಗೆಯಿಂದ ಹೊರಬರುವಂತೆ ಮಾಡಿದೆ. ಅದಲ್ಲದೆ ಸರ್ಕಾರೇತರ ಸಂಸ್ಥೆಗಳು ಶೈಕ್ಷಣಿಕ ಮತ್ತು ಕೃಷಿ ಕ್ಷೇತ್ರಗಳಲ್ಲಿಯೂ ಗಣನೀಯವಾದ ಸೇವೆಗಳನ್ನು ಜನರಿಗೆ ಒದಗಿಸುತ್ತಾ ಬಂದಿವೆ. ಸರ್ಕಾರೇತರ ಸಂಸ್ಥೆಗಳು ಮಹಿಳಾ ಮತ್ತು ಮಕ್ಕಳ ಹಕ್ಕುಗಳ ರಕ್ಷಣೆಗಾಗಿ ಮತ್ತು ಮಹಿಳಾ ಸಬಲೀಕರಣವನ್ನು ಒದಗಿಸುವಲ್ಲಿ ಪ್ರಮುಖ ಪಾತ್ರವಹಿಸುತ್ತವೆ.

ಪ್ರಸ್ತುತ ಅಧ್ಯಯನದಲ್ಲಿ ದಕ್ಷಿಣ ಕನ್ನಡ ಜಿಲ್ಲೆಯ ಸರ್ಕಾರೇತರ ಸಂಸ್ಥೆಗಳು ಶೈಕ್ಷಣಿಕ , ಕೃಷಿ ,ಸ್ವ–ಉದ್ಯೋಗ ಮತ್ತು ಇನ್ನಿತರ ಕ್ಷೇತ್ರಗಳಲ್ಲಿ ಹೇಗೆ ತಮ್ಮ ಕಾರ್ಯವನ್ನು ನಿರ್ವಹಿಸುತ್ತವೆ ಮತ್ತು ದಕ್ಷಿಣಕನ್ನಡ ಜಿಲ್ಲೆಯಲ್ಲಿ ಹೇಗೆ ಗ್ರಾಮೀಣ ಅಭಿವೃದ್ಧಿಯನ್ನು ಸಾಧಿಸಿವೆ ಮತ್ತು ಫಲಾನುಭವಿಗಳ ಸಾಮಾಜಿಕ ಮತ್ತು ಆರ್ಥಿಕ ಬದಲಾವಣೆಗಳನ್ನು ತಿಳಿಯಲು ಈ ಅಧ್ಯಯನವು ಮುಖ್ಯವೆನಿಸುತ್ತದೆ.

## ೧.೭ ಅಧ್ಯಯನದ ಇತಿಮಿತಿಗಳು

೧. ಗ್ರಾಮೀಣಾಭಿವೃದ್ಧಿಯಲ್ಲಿ ಸರ್ಕಾರೇತರ ಸಂಸ್ಥೆಗಳ ಪಾತ್ರ ಎಂಬ ಅಧ್ಯಯನದ ವ್ಯಾಪ್ತಿಯನ್ನು ದಕ್ಷಿಣಕನ್ನಡ ಜಿಲ್ಲೆಯ ಕೆಲವು ಗ್ರಾಮೀಣ ಪ್ರದೇಶಗಳಿಗೆ ಸೀಮಿತಗೊಳಿಸಲಾಗಿದೆ.

೨. ಈ ಅಧ್ಯಯನದಲ್ಲಿ ಗ್ರಾಮೀಣ ಪ್ರದೇಶದ ಸಮಸ್ಯೆಗಳನ್ನು ವಿವಿಧ ನೆಲೆಗಳಲ್ಲಿ ಅಧ್ಯಯನ ಮಾಡಲು ಸರ್ಕಾರೇತರ ಸಂಸ್ಥೆಗಳ ಫಲಾನುಭವಿಗಳ ಅಂಕಿ ಅಂಶಗಳನ್ನು ಮಾತ್ರ ಉಪಯೋಗಿಸಲಾಗಿದೆ.

೩. ಈ ಅಧ್ಯಯನವನ್ನು ದಕ್ಷಿಣಕನ್ನಡ ಜಿಲ್ಲೆಯ ಕೆಲವು ಸರ್ಕಾರೇತರ ಸಂಸ್ಥೆಗಳಿಗೆ ಮಾತ್ರ ಸೀಮಿತಗೊಳಿಸಲಾಗಿದೆ.

೪. ಪ್ರಸ್ತುತ ಅಧ್ಯಯನದಲ್ಲಿ ಸ್ವ-ಸಹಾಯ ಗುಂಪುಗಳ ಮೇಲೆ ಯಾವುದೇ ಅಧ್ಯಯನವನ್ನು ನಡೆಸಿಲ್ಲ

## ೧.೮ ಅಧ್ಯಾಯಗಳ ಕಿರು ಪರಿಚಯ

ಈ ಸಂಶೋಧನಾ ಅಧ್ಯಯನವನ್ನು ಐದು ಮುಖ್ಯ ಅಧ್ಯಾಯಗಳಾಗಿ ವಿಂಗಡಿಸಲಾಗಿದೆ.

**ಮೊದಲನೆಯ** ಅಧ್ಯಾಯದಲ್ಲಿ ಅಧ್ಯಯನದ ಮಹತ್ವ ಮತ್ತು ಸ್ವರೂಪವನ್ನು ವಿವರಿಸಲಾಗಿದೆ. ಗ್ರಾಮೀಣ ಅಭಿವೃದ್ಧಿಯ ಮಹತ್ವ ಮತ್ತು ಸರ್ಕಾರೇತರ ಸಂಸ್ಥೆಗಳ ಪ್ರಾಮುಖ್ಯತೆ ಬಗ್ಗೆ ಪ್ರವೇಶ ಭಾಗದಲ್ಲಿ ಚರ್ಚಿಸಲಾಗಿದೆ. ಈ ಅಧ್ಯಾಯದ ಮುಂದಿನ ಭಾಗವು ಅಧ್ಯಯನದ ಸಮಸ್ಯೆಗಳು, ಉದ್ದೇಶಗಳು, ಊಹೆಗಳು, ಇತಿಮಿತಿಗಳು ಮತ್ತು ಅಧ್ಯಯನದ ವಿಧಾನಗಳನ್ನು ಒಳಗೊಂಡಿದೆ.

**ಎರಡನೆಯ** ಅಧ್ಯಾಯದಲ್ಲಿ ಗ್ರಾಮೀಣ ಅಭಿವೃದ್ಧಿ ಮತ್ತು ಸರ್ಕಾರೇತರ ಸಂಸ್ಥೆಗಳ ಬಗ್ಗೆ ನಿರೂಪಣೆಯನ್ನು ನೀಡಲಾಗಿದೆ. ಈ ಅಧ್ಯಾಯವು ಗ್ರಾಮೀಣ ಅಭಿವೃದ್ಧಿಯ ವಿವಿಧ ಆಯಾಮಗಳು

ಮತ್ತು ಸರ್ಕಾರೇತರ ಸಂಸ್ಥೆಗಳ ಸಾಹಿತ್ಯ ಸಮೀಕ್ಷೆ ಮತ್ತು ಸರ್ಕಾರೇತರ ಸಂಸ್ಥೆಗಳು ಹಮ್ಮಿಕೊಂಡಿರುವ ಗ್ರಾಮೀಣ ಅಭಿವೃದ್ಧಿ ಯೋಜನೆಗಳ ಬಗ್ಗೆ ಮಾಹಿತಿ ನೀಡಲಾಗಿದೆ.

**ಮೂರನೆಯ** ಅಧ್ಯಾಯವು ದಕ್ಷಿಣಕನ್ನಡ ಜಿಲ್ಲೆಯ ಸರ್ಕಾರೇತರ ಸಂಸ್ಥೆಗಳ ಸ್ಥಿತಿಗತಿಗಳು ಮತ್ತು ಅಧ್ಯಯನ ಪ್ರದೇಶದ ಸಾಮಾಜಿಕ ಮತ್ತು ಆರ್ಥಿಕ ಸ್ಥೂಲ ಪರಿಚಯವನ್ನು ನೀಡಲಾಗಿದೆ. ಈ ಅಧ್ಯಾಯವು ದಕ್ಷಿಣಕನ್ನಡ ಜಿಲ್ಲೆಯಲ್ಲಿರುವ ವಿವಿಧ ಸರ್ಕಾರೇತರ ಸಂಸ್ಥೆಗಳು ಮತ್ತು ಅವುಗಳ ಸಮಸ್ಯೆಗಳು, ಇತಿಮಿತಿಗಳು ಮತ್ತು ಬಲಪಡಿಸುವಿಕೆಯನ್ನು ಒಳಗೊಂಡಿದೆ.

**ನಾಲ್ಕನೆಯ** ಅಧ್ಯಾಯದಲ್ಲಿ ದಕ್ಷಿಣಕನ್ನಡ ಜಿಲ್ಲೆಯಲ್ಲಿ ನಡೆಸಿದ ಕ್ಷೇತ್ರಕಾರ್ಯದಲ್ಲಿ ದೊರೆತ ಅಂಕಿಅಂಶಗಳ ಆಧಾರದಲ್ಲಿ ಸರ್ಕಾರೇತರ ಸಂಸ್ಥೆಗಳ ಕಾರ್ಯನಿರ್ವಹಣೆ ಮತ್ತು ಗ್ರಾಮೀಣ ಅಭಿವೃದ್ಧಿಯಲ್ಲಿ ಅವುಗಳ ಪಾತ್ರದ ಕುರಿತು ವಿಶ್ಲೇಷಣೆಯನ್ನು ಮಾಡಲಾಗಿದೆ.

**ಐದನೆಯ** ಅಧ್ಯಾಯವು ಒಟ್ಟು ಸಂಶೋಧನೆಯ ಸಾರಾಂಶವನ್ನು ಹೇಳುತ್ತದೆ. ಈ ಭಾಗವು ಪ್ರಮುಖವಾಗಿ ಅಧ್ಯಯನದ ಶೋಧ ಹಾಗೂ ನಿರ್ಣಯಗಳನ್ನು ತಿಳಿಸುತ್ತದೆ. ಸಮಸ್ಯೆಗಳ ಪರಿಹಾರಕ್ಕೆ ಸಲಹೆ ಸೂಚನೆಗಳನ್ನು ನೀಡಲಾಗಿದೆ. ಹಾಗೂ ಅಧ್ಯಯನಕ್ಕೆ ಬಳಸಿದ ಆಕರ ಗ್ರಂಥಗಳ ಬಗ್ಗೆ ಮಾಹಿತಿಯನ್ನು ಈ ಭಾಗದಲ್ಲಿ ಕಾಣಬಹುದು.



# ಅಧ್ಯಾಯ - ೨

# ಗ್ರಾಮೀಣಾಭಿವೃದ್ಧಿ ಮತ್ತು ಸರ್ಕಾರೇತರ ಸಂಸ್ಥೆಗಳ ನಿರೂಪಣೆ

# ಅಧ್ಯಾಯ -೨

# ಗ್ರಾಮೀಣಾಭಿವೃದ್ಧಿ ಮತ್ತು ಸರ್ಕಾರೇತರ ಸಂಸ್ಥೆಗಳ ನಿರೂಪಣೆ.

## ೨.೧ ಪ್ರವೇಶ:

ಗ್ರಾಮೀಣಾಭಿವೃದ್ಧಿ ಎಂದರೆ ಗ್ರಾಮೀಣ ಪ್ರದೇಶಗಳ ಅಭಿವೃದ್ಧಿಗಾಗಿ, ಲಭ್ಯವಿರುವ ಮಾನವ ಮತ್ತು ನೈಸರ್ಗಿಕ ಸಂಪನ್ಮೂಲಗಳ ಗರಿಷ್ಠ ಬಳಕೆಯ ಉದ್ದೇಶದಿಂದ ಕೃಷಿ, ಅರಣ್ಯೀಕರಣ, ಮೀನುಗಾರಿಕೆ, ಗ್ರಾಮೀಣ ಕರಕುಶಲತೆ, ಕೈಗಾರಿಕೆಗಳು, ಸಾಮಾಜಿಕ ಮತ್ತು ಆರ್ಥಿಕ ಮೂಲರಚನಾ ಸೌಕರ್ಯಗಳ ನಿರ್ಮಾಣ ಮೊದಲಾದ ಚಟುವಟಿಕೆಗಳನ್ನು ಉತ್ತೇಜಿಸುವ, ಗ್ರಾಮೀಣ ಬಡಜನರ ಆದಾಯ ಮತ್ತು ಜೀವನ ಮಟ್ಟವನ್ನು ಸುಧಾರಿಸುವ ಮತ್ತು ಜನರು ಅಭಿವೃದ್ಧಿ ಪ್ರಕ್ರಿಯೆಯಲ್ಲಿ ಪರಿಣಾಮಕಾರಿಯಾಗಿ ಪಾಲ್ಗೊಳ್ಳುವಂತೆ ಮಾಡುವ, ನೀತಿ ನಿಯಮಗಳು ಮತ್ತು ಕಾರ್ಯಕ್ರಮಗಳು ಗ್ರಾಮೀಣಾಭಿವೃದ್ಧಿಯಾಗಿದೆ.

## ೨.೨ ಗ್ರಾಮೀಣ ಅಭಿವೃದ್ಧಿಯ ವಿವಿಧ ಆಯಾಮಗಳು:

### ಗ್ರಾಮೀಣ ಅಭಿವೃದ್ಧಿಯ ಸ್ವಭಾವ :

ಹಲವಾರು ವರ್ಷಗಳಿಂದೀಚೆಗೆ, ಗ್ರಾಮೀಣ ಅಭಿವೃದ್ಧಿಯು ಗ್ರಾಮೀಣ ಬಡಜನರ ಆರ್ಥಿಕ ಮತ್ತು ಸಾಮಾಜಿಕ ಜೀವನವನ್ನು ಸುಧಾರಿಸುವ ನೀತಿಯಾಗಿ ಹೊರಹೊಮ್ಮಿದೆ. ಇದು ಗ್ರಾಮೀಣ ಪ್ರದೇಶಗಳಲ್ಲಿ ವಾಸಿಸುವ ಜನಸಂಖ್ಯೆಯ ಅಭಿವೃದ್ಧಿಯ ಲಾಭಗಳನ್ನು ವಿಸ್ತರಿಸುವ ಉದ್ದೇಶವನ್ನು ಹೊಂದಿದೆ.

ಗ್ರಾಮೀಣ ಅಭಿವೃದ್ಧಿಯು ವಿಭಿನ್ನ ಆಯಾಮಗಳನ್ನು ಒಳಗೊಂಡಿದೆ. ಒಂದು ವಿಧಾನವಾಗಿ, ಇದು ಎಲ್ಲಾ ಕಾರ್ಯಕ್ರಮಗಳಲ್ಲಿ ಜನರ ಪಾಲ್ಗೊಳ್ಳುವಿಕೆಯನ್ನು ಬಯಸುತ್ತದೆ. ಒಂದು ಪ್ರಕ್ರಿಯೆಯಾಗಿ ವಿಜ್ಞಾನ ಮತ್ತು ತಂತ್ರಜ್ಞಾನದ ಬಳಕೆಯ ಮೂಲಕ ಸಂಪ್ರದಾಯ ಆಧಾರಿತ ಗ್ರಾಮೀಣ ಆಚರಣೆಗಳನ್ನು ಆಧುನೀಕರಣಗೊಳಿಸುವುದನ್ನು ಇದು ಬಯಸುತ್ತದೆ. ಇದರ ಮುಖ್ಯ ಉದ್ದೇಶ ಗ್ರಾಮೀಣ ಜನರ ಜೀವನ ಗುಣಮಟ್ಟವನ್ನು ಸುಧಾರಿಸುವುದಾಗಿದೆ.

ಗ್ರಾಮೀಣ ಜನರ ಜೀವನ ಮಟ್ಟವನ್ನು ಸುಧಾರಿಸುವುದರಿಂದ ಗ್ರಾಮೀಣ ಅಭಿವೃದ್ಧಿ ಸಾಧ್ಯವಾಗಿದೆ. ಈ ಪರಿಕಲ್ಪನೆಯು ಅನೇಕ ಆಯಾಮಗಳನ್ನು ಒಳಗೊಂಡಿದೆ ಅವುಗಳು ಯಾವುದೆಂದರೆ ಕೃಷಿ ಮತ್ತು ಅವಲಂಬಿತ ಚಟುವಟಿಕೆಗಳು, ಗುಡಿ ಕೈಗಾರಿಕೆಗಳು, ಸಾಂಪ್ರದಾಯಿಕ

ಕರಕುಶಲತೆ ಸಾಮಾಜಿಕ ಆರ್ಥಿಕ ಮೂಲ ರಚನಾ ಸೌಕರ್ಯಗಳು, ಗ್ರಾಮೀಣ ಜನಶಕ್ತಿಯ ಅಭಿವೃದ್ಧಿ ಮತ್ತು ಸಮುದಾಯ ಸೇವೆ ಮತ್ತು ಸೌಲಭ್ಯಗಳ ಸುಧಾರಣೆಯನ್ನು ಒಳಗೊಂಡಿದೆ.

ಗ್ರಾಮೀಣ ಆರ್ಥಿಕ ವ್ಯವಸ್ಥೆಯ ಎಲ್ಲಾ ಅಂಶಗಳನ್ನು ಗ್ರಾಮೀಣಾಭಿವೃದ್ಧಿ ಒಳಗೊಂಡಿದೆ. ಇದು ಕೃಷಿಕರು, ಭೂರಹಿತ ಕಾರ್ಮಿಕರು ಮತ್ತು ಕರಕುಶಲಕರ್ಮಿಗಳಿಗೆ ಉತ್ತಮ ಸವಲತ್ತುಗಳನ್ನು ನೀಡುತ್ತದೆ.

ಗ್ರಾಮೀಣಾಭಿವೃದ್ಧಿಯನ್ನು ಸಾಧಿಸಲು ಬಡತನವನ್ನು ನಿವಾರಿಸಿ ಜನರಿಗೆ ಉತ್ತಮ ಉದ್ಯೋಗವಕಾಶಗಳನ್ನು ದೊರಕಿಸಿ ಕೊಡಬೇಕು ಮತ್ತು ಉತ್ತಮವಾದ ಹೊಸ ತಂತ್ರಜ್ಞಾನಗಳನ್ನು ಅವಿಷ್ಕರಿಸಬೇಕು. ಇಂತಹ ತಂತ್ರಜ್ಞಾನ, ಬೆಳವಣಿಗೆಯ ದರವನ್ನು ವೃದ್ಧಿಸುವ ಮತ್ತು ಉದ್ಯೋಗವಕಾಶಗಳನ್ನು ಹೆಚ್ಚಿಸುವ ಉದ್ದೇಶಗಳನ್ನು ಗ್ರಾಮೀಣ ಅಭಿವೃದ್ಧಿಯು ಹೊಂದಿದೆ. ಅದಲ್ಲದೆ ಗ್ರಾಮೀಣ ಅಭಿವೃದ್ಧಿಗೆ ಬೇಕಾದಂತಹ ಸೂಕ್ತ ಸಂಸ್ಥೆಗಳನ್ನು ಸ್ಥಾಪಿಸುವುದು ಮತ್ತು ಅವುಗಳ ಚಟುವಟಿಕೆಗಳಲ್ಲಿ ಸಮನ್ವಯ ತರುವುದು ಅತೀ ಅಗತ್ಯವಾಗಿದೆ. ಗ್ರಾಮೀಣಾಭಿವೃದ್ಧಿಯು ಗ್ರಾಮೀಣ ಪ್ರದೇಶದಲ್ಲಿ ಸ್ವಾವಲಂಬನೆಯನ್ನು ಒದಗಿಸುವಂತಹ ಒಂದು ಪ್ರಕ್ರಿಯೆಯಾಗಿದೆ.

## ಗ್ರಾಮೀಣ ಅಭಿವೃದ್ಧಿಯ ವ್ಯಾಪ್ತಿ:

ಗ್ರಾಮೀಣ ಅಭಿವೃದ್ಧಿಯ ವ್ಯಾಪ್ತಿಯು ವ್ಯಾಪಕವೂ ಮತ್ತು ಪರಿಣಾಮಕಾರಿಯಾಗಿದೆ. ಇದು ವಿವಿಧ ಕ್ಷೇತ್ರಗಳನ್ನು ಗುರುತಿಸಿ ಗ್ರಾಮೀಣ ಅಭಿವೃದ್ಧಿಯನ್ನು ಸಾಧಿಸುವ ಪ್ರಯತ್ನವನ್ನು ನಡೆಸುತ್ತದೆ.

ಜನರಲ್ಲಿ ಸಾಮಾಜಿಕ ಪ್ರಜ್ಞೆಯನ್ನು ಬೆಳಸುವುದು ಗ್ರಾಮೀಣಾಭಿವೃದ್ಧಿಯ ಪ್ರಥಮ ಹಂತವಾಗಿದೆ. ಅಭಿವೃದ್ಧಿಗೆ ಇರುವ ವಿವಿಧ ಅಡತಡೆಗಳು, ಅವುಗಳನ್ನು ನಿವಾರಿಸುವ ವಿಧಾನಗಳು, ತಾವು ವಾಸಿಸುವ ಸಮೂದಾಯದಲ್ಲಿರುವಂತಹ ತಮ್ಮ ಹಕ್ಕುಗಳು ಮತ್ತು ಕರ್ತವ್ಯಗಳು, ತಮ್ಮ ಸಂಪ್ರದಾಯಗಳ ಪ್ರಗತಿಪರ ಅಂಶಗಳು, ತಮ್ಮ ಸಾಮರ್ಥ್ಯ ಮತ್ತು ಅಭಿವೃದ್ಧಿ ಹೊಂದಲು ತಮಗಿರುವ ಅವಕಾಶಗಳು ಮೊದಲಾದುವುಗಳ ಬಗ್ಗೆ ಜನರಿಗೆ ಅರಿವನ್ನು ಮೂಡಿಸಬೇಕು. ಗ್ರಾಮೀಣ ಜನರು ತಮ್ಮ ಅಭಿವೃದ್ಧಿಗೆ ಇರುವ ಅವಕಾಶಗಳ ಬಗ್ಗೆ ಚಿಂತಿಸುವಂತೆ ಅವರಿಗೆ ಉತ್ತಮ ಶಿಕ್ಷಣವನ್ನು ನೀಡಬೇಕು.

ಪ್ರಜಾಪ್ರಭುತ್ವದ ಮೌಲ್ಯಗಳೊಂದಿಗೆ, ಗ್ರಾಮಗಳ ಅಭಿವೃದ್ಧಿಗೆ ಸಮರ್ಪಣಾ ಭಾವದ ಮತ್ತು ಪ್ರಾಮಾಣಿಕ ನಿಲುವಿನ ನಾಯಕತ್ವದ ಅಗತ್ಯವಿದೆ. ಕೇವಲ ಪ್ರಾಮಾಣಿಕ ನಾಯಕರ ಮೂಲಕ ಮಾತ್ರ ಹಳ್ಳಿಗಳು ಸ್ಫೂರ್ತಿಯನ್ನು ಪಡೆಯಬಲ್ಲವು ಮತ್ತು ಜನರಿಗೆ ಸೂಕ್ತ ನಿರ್ದೇಶನವನ್ನು ನೀಡಲು ಸಾಧ್ಯವಾಗುತ್ತದೆ. ಯಾವಾಗ ಜನರು ಸಮಸ್ಯೆಗಳನ್ನು ಎದುರಿಸುತ್ತಾರೋ, ಅವುಗಳ ಬಗ್ಗೆ ಚರ್ಚಿಸಿ

ಸೂಕ್ತ ನಿರ್ಧಾರ ಕೈಗೊಳ್ಳುತ್ತಾರೋ ಆಗ ಅಭಿವೃದ್ಧಿ ಕಡೆಗಿನ ಚಳುವಳ ಆರಂಭವಾಗುತ್ತದೆ. ಇದಕ್ಕಾಗಿ ಗ್ರಾಮೀಣ ಜನರು ಸಂಘಟಿತರಾಗಬೇಕು. ಸಮುದಾಯಗಳಲ್ಲಿ ಸಂಘಟಿತ ನಿರ್ಧಾರಗಳನ್ನು ಜಾರಿಗೊಳಿಸಲು ಸೂಕ್ತ ವ್ಯವಸ್ಥೆಯಿರಬೇಕು.

ಹಲವಾರು ವಿಧಗಳಲ್ಲಿ ಗ್ರಾಮೀಣ ಅಭಿವೃದ್ಧಿಗೆ ವಿಜ್ಞಾನ ಮತ್ತು ಹೊಸ ತಂತ್ರಜ್ಞಾನಗಳ ಬಳಕೆ ಅವಶ್ಯಕವಾಗಿದೆ. ವಿಜ್ಞಾನ ಮತ್ತು ಹೊಸ ತಂತ್ರಜ್ಞಾನಗಳನ್ನು ಬಳಸುವುದರಿಂದ ಎಲ್ಲಾ ವಲಯಗಳಲ್ಲಿ ಹೆಚ್ಚಿನ ಮಟ್ಟದ ಉತ್ಪಾದಕತೆಯನ್ನು ತರುವಲ್ಲಿ ಸಹಾಯ ಮಾಡುತ್ತದೆ. ರೋಗಗಳನ್ನು ವಾಸಿಗೊಳಿಸುವುದರಿಂದ ಹಿಡಿದು ಜನರ ಜೀವನ ಮಟ್ಟವನ್ನು ಸುಧಾರಿಸುವ ಎಲ್ಲಾ ಹಂತಗಳಲ್ಲಿ ವಿಜ್ಞಾನ ಮಾನವನಿಗೆ ನೆರವಾಗಿದೆ.

ಗ್ರಾಮೀಣ ಅಭಿವೃದ್ಧಿಯನ್ನು ಸಾಧಿಸಲು ಬಡತನ ನಿರ್ಮೂಲನೆ ಮತ್ತು ನಿರುದ್ಯೋಗ ಸಮಸ್ಯೆಗಳನ್ನು ನಿರ್ಮೂಲನೆ ಮಾಡಬೇಕು. ಕಚ್ಛಾ ವಸ್ತು, ಬಂಡವಾಳ ಇತ್ಯಾದಿ ಸ್ಥಳೀಯ ಸಂಪನ್ಮೂಲಗಳನ್ನು ಗುರುತಿಸಬೇಕು ಮತ್ತು ಸೂಕ್ತ ಗುಡಿ ಕೈಗಾರಿಕೆಗಳನ್ನು ಪ್ರಾರಂಭಿಸಬೇಕು. ಭೂ ಸುಧಾರಣೆ ಮತ್ತು ಅನೇಕ ಕಾರ್ಯಕ್ರಮಗಳನ್ನು ಜಾರಿಗೆ ತಂದು ಕೃಷಿ ಮತ್ತು ಅವಲಂಬಿತ ಚಟುವಟಿಕೆಗಳನ್ನು ಅಭಿವೃದ್ಧಿ ಪಡಿಸಬೇಕು. ಅದಲ್ಲದೆ ಉತ್ತಮ ನೀರಾವರಿ ,ಆಧುನಿಕ ಸಲಕರಣೆಗಳು, ಹಣಕಾಸಿನ ಪೂರೈಕೆ, ದಕ್ಷ ಮಾರುಕಟ್ಟೆ ಮುಂತಾದ ಸೌಲಭ್ಯಗಳನ್ನು ಒದಗಿಸುವುದರಿಂದ ಜನರ ಜೀವನ ಮಟ್ಟ ಸುಧಾರಣೆಯನ್ನು ಹೊಂದಿ ಗ್ರಾಮೀಣ ಅಭಿವೃದ್ಧಿಯನ್ನು ಸಾಧಿಸಲು ಸಾಧ್ಯವಾಗುತ್ತದೆ.

## ಗ್ರಾಮೀಣಾಭಿವೃದ್ಧಿಯ ಉದ್ದೇಶಗಳು :

ಭಾರತದಲ್ಲಿ ಗ್ರಾಮೀಣ ಅಭಿವೃದ್ಧಿಯು ಹಲವಾರು ರೀತಿಯಲ್ಲಿ ತನ್ನದೇ ಆದ ಮಹತ್ವವನ್ನು ಪಡೆದುಕೊಂಡಿದೆ. ಭಾರತದಲ್ಲಿ ಅಷ್ಟೇ ಅಲ್ಲದೆ ತೃತೀಯ ಜಗತ್ತಿನಲ್ಲಿಯೇ ಗ್ರಾಮೀಣ ಅಭಿವೃದ್ಧಿಯ ಅವಶ್ಯಕತೆಯಿದೆ. ಭಾರತವು ಗ್ರಾಮಗಳಿಂದ ಕೂಡಿದ ದೇಶ. ನಮ್ಮ ಗ್ರಾಮಗಳು ಕೃಷಿ ಮೂಲವಾಗಿದೆ. ಗ್ರಾಮೀಣ ಅಭಿವೃದ್ಧಿಯ ಮೇಲೆ ಸಂಪೂರ್ಣವಾಗಿ ಅವಲಂಬಿಸಿದೆ. ಆದ್ದರಿಂದ ಗ್ರಾಮಗಳನ್ನು ಅಭಿವೃದ್ಧಿಗೊಳಿಸುವುದು ಅನಿವಾರ್ಯ ಮತ್ತು ಅವಶ್ಯಕವಾಗಿದೆ. ಗ್ರಾಮೀಣ ದಾರಿದ್ರ್ಯತನವನ್ನು ನಿರ್ಮೂಲ ಮಾಡುವುದು ಮತ್ತು ಶೋಷಣೆಗೆ ಒಳಪಟ್ಟ ದಲಿತ ವರ್ಗದ, ಕೃಷಿ ವರ್ಗದ ಜನಾಂಗವನ್ನು ಮತ್ತು ಕುಶಲಕರ್ಮಿಗಳನ್ನು ಆರ್ಥಿಕವಾಗಿ, ಸಾಮಾಜಿಕವಾಗಿ ಮೇಲೆಕ್ಕೆತ್ತುವದಕ್ಕಾಗಿ ಗ್ರಾಮೀಣ

ಅಭಿವೃದ್ಧಿಯ ಅವಶ್ಯಕತೆ ಇದೆ. ಗ್ರಾಮೀಣ ಅಭಿವೃದ್ಧಿಯ ಕಾರ್ಯ ಕ್ಷೇತ್ರ ವಿಶಾಲವಾಗಿರುವುದರಿಂದ ಕೇಂದ್ರ ಮತ್ತು ರಾಜ್ಯ ಸರಕಾರಗಳು ಆಯಾ ಕ್ಷೇತ್ರ ಮತ್ತು ವರ್ಗಗಳ ಅಭಿವೃದ್ಧಿಗೆ ಸಂಬಂಧ ಪಟ್ಟಂತೆ

ಹಲವಾರು ಗ್ರಾಮೀಣ ಅಭಿವೃದ್ಧಿ ಕಾರ್ಯಕ್ರಮಗಳನ್ನು ಸಮುದಾಯದ ಪರಿಸ್ಥಿತಿಗೆ ತಕ್ಕಂತೆ ವಿಶೇಷ ಯೋಜನೆಗಳನ್ನು ಹಮ್ಮಿಕೊಳ್ಳುತ್ತಾ ಬಂದಿದೆ.

ಗ್ರಾಮೀಣ ಅಭಿವೃದ್ಧಿಯು ವಿವಿಧ ಚಟವಟಿಕೆ ಮತ್ತು ಯೋಜನಾ ಕ್ರಮಗಳನ್ನು ಒಳಗೊಂಡಿದೆ. ಕೃಷಿ ವ್ಯವಸಾಯದಲ್ಲಿ ಉತ್ಪಾದನೆಯನ್ನು ಹೆಚ್ಚಿಸುವ ಹೊಸ ಉದ್ಯೋಗವಕಾಶಗಳನ್ನು ನಿರ್ಮಿಸುವ, ಆರೋಗ್ಯ ಸುಧಾರಣೆ, ಶಿಕ್ಷಣ ಪ್ರಸಾರ, ಸಾರಿಗೆ ಸಂಪರ್ಕ ಸಾಧನಗಳ ಸೌಕರ್ಯಗಳನ್ನು ಹೆಚ್ಚಿಸುವ ಹಾಗೂ ವಸತಿ ವ್ಯವಸ್ಥೆಯನ್ನು ಒದಗಿಸುವ ಉದ್ದೇಶವನ್ನಿಟ್ಟುಕೊಂಡಿದೆ. ಆದರೆ ಗ್ರಾಮೀಣ ಅಭಿವೃದ್ಧಿಯ ಆಯಾ ದೇಶದ ಅಥವಾ ಪ್ರದೇಶದ ರಾಜಕೀಯ, ಸಾಮಾಜಿಕ ಮತ್ತು ಆರ್ಥಿಕ ಅಂಶಗಳ ಮೇಲೆ ಅವಲಂಬಿಸಿರುತ್ತದೆ. ಯಾವುದೇ ಸಮಾಜದಲ್ಲಿ ಎಲ್ಲಾ ಜನರು ಒಂದೇ ರೀತಿಯ ಸ್ಥಾನಮಾನವನ್ನಾಗಲಿ, ಆರ್ಥಿಕ ಸ್ಥಿತಿಯನ್ನಾಗಲಿ ಹೊಂದಿರುವುದು ಅಸಾಧ್ಯ ಆದುದ್ದರಿಂದ ಎಲ್ಲಾ ವರ್ಗದ ಜನರಿಗೆ ಅನ್ವಯವಾಗುವಂತೆ ಅಭಿವೃದ್ಧಿಯನ್ನು ಸಾಧಿಸುವುದೇ ಗ್ರಾಮೀಣ ಅಭಿವೃದ್ಧಿಯ ಮುಖ್ಯ ಉದ್ದೇಶವಾಗಿದೆ.

ಭಾರತೀಯ ಗ್ರಾಮಗಳು ಶತಮಾನಗಳ ಹಿಂದೆ ಸ್ವಯಂ ಪರಿಪೂರ್ಣತೆಗೊಂಡಿದ್ದವು ಆದರೆ ಕಾಲಕ್ರಮೇಣ ಹಲವಾರು ಕಾರಣಗಳಿಂದ ತಮ್ಮ ಆರ್ಥಿಕ ದುಸ್ಥಿತಿಯಲ್ಲಿ ಸಿಲುಕಿಕೊಂಡು ಬಡತನದಿಂದ ಬಳಲಲು ಪ್ರಾರಂಭಿಸಿದವು. ಆರ್ಥಿಕವಾಗಿ ಎಲ್ಲವನ್ನೂ ಕಳೆದುಕೊಂಡು ಅವನತಿಯ ಸ್ಥಿತಿಯಲ್ಲಿದ್ದ ಗ್ರಾಮಗಳನ್ನು ಪುನಶ್ಚೇತನಗೊಳಿಸಿ ಅವುಗಳ ಸ್ವಯಂ ಮತ್ತು ಆರ್ಥಿಕ, ಸಾಮಾಜಿಕ ಬಲವನ್ನು ಹೆಚ್ಚಿಸಿ ಗ್ರಾಮಗಳನ್ನು ಸುಧಾರಣೆ ಮಾಡುವುದರೊಂದಿಗೆ ದೇಶದ ಆರ್ಥಿಕ ಪರಿಸ್ಥಿತಿಯನ್ನು ಸುಧಾರಣೆ ಮಾಡುವುದು ಅವಶ್ಯಕವಾಗಿದೆ.

ಆದುದರಿಂದ ಗ್ರಾಮೀಣ ಅಭಿವೃದ್ಧಿಯು ಗ್ರಾಮಗಳನ್ನು ಸ್ವಯಂ ಪರಿಪೂರ್ಣತೆಯತ್ತ ಕೊಂಡೊಯ್ಯುವ ಮತ್ತು ಅವುಗಳ ಆರ್ಥಿಕ, ಸಾಮಾಜಿಕ, ರಾಜಕೀಯ ಮತ್ತು ಶೈಕ್ಷಣಿಕ ಸಾಮರ್ಥ್ಯ ಹೆಚ್ಚಿಸುವುದು ಗ್ರಾಮೀಣ ಅಭಿವೃದ್ಧಿಯ ಗುರಿಯಾಗಿದೆ. ಸಾಮಾನ್ಯವಾಗಿ ಗ್ರಾಮೀಣ ಸಮಾಜದಲ್ಲಿ ಶ್ರೀಮಂತರು ತಮ್ಮ ಶ್ರೀಮಂತಿಕೆಯನ್ನು ಉಳಿಸಿಕೊಂಡು ಬಂದರೆ, ದುರ್ಬಲ ವರ್ಗದವರು ತಮ್ಮ ಬಡತನವನ್ನು ಬೆಳೆಸಿಕೊಳ್ಳುತ್ತಾ ಬರುತ್ತಿದ್ದಾರೆ. ಇದು ನಮ್ಮ ಗ್ರಾಮೀಣ ಸಮಾಜದ ದುಸ್ಥಿತಿಯಾಗಿದೆ. ಇಂತಹ ಗ್ರಾಮೀಣ ಬಡತನವನ್ನು ಹೋಗಲಾಡಿಸಲು ಸರಕಾರವು ಹಲವಾರು ಕ್ರಮಗಳನ್ನು

ಕೈಗೊಂಡಿದೆ. ಗ್ರಾಮೀಣ ಪ್ರದೇಶದಲ್ಲಿರುವ ಬಡತನ ಮತ್ತು ದಾರಿದ್ರ್ಯ ನಿರ್ಮೂಲನೆ ಗ್ರಾಮೀಣ ಅಭಿವೃದ್ಧಿಯ ಮುಖ್ಯ ಉದ್ದೇಶವಾಗಿದೆ.

ಗ್ರಾಮೀಣ ಕುಶಲ ಕರ್ಮಿಗಳ ಅಭಿವೃದ್ಧಿಯಾಗದೇ ಕೃಷಿಯ ಅಭಿವೃದ್ಧಿ ಅಸಾಧ್ಯ . ಕೃಷಿ ಸುಧಾರಣೆಯಾಗಬೇಕಾದರೆ ಕೃಷಿ ಉಪಕರಣಗಳ ಸುಧಾರಣೆಯು ಅವಶ್ಯಕವಾಗಿದೆ. ಸಾಂಪ್ರದಾಯಿಕ ಕೃಷಿ ಸಲಕರಣೆಗಳು ಆಧುನಿಕ ಕೃಷಿ ವಿಧಾನಕ್ಕೆ ಸರಿಹೊಂದಲಾರವು. ಆದ್ದರಿಂದ ಕೃಷಿ ಉಪಕರಣಗಳಲ್ಲಿ ಗಣನೀಯವಾವ ಬದಲಾವಣೆಯನ್ನು ತರುವ ಅವಶ್ಯಕತೆಯಿದೆ. ಗ್ರಾಮೀಣ ಜನತೆಗೆ ಉದ್ಯೋಗ ಸೃಷ್ಟಿಸುವುದನ್ನು ಗ್ರಾಮೀಣಾಭಿವೃದ್ಧಿ ಒಳಗೊಳ್ಳುತ್ತದೆ.

ಗ್ರಾಮೀಣ ಪ್ರದೇಶದ ಜನರು ನಿರುದ್ಯೋಗ ಸಮಸ್ಯೆಯಿಂದ ಬಳಲುತ್ತಿದ್ದಾರೆ. ಯಾವುದೇ ಆರ್ಥಿಕ ಚಟುವಟಿಕೆ ಪ್ರಾರಂಭಿಸಲು ಬಂಡವಾಳ ಅತ್ಯಗತ್ಯ. ಆದರೆ ಬಡ ಜನರಲ್ಲಿ ಉಳಿತಾಯ ಸಾಮರ್ಥ್ಯವೇ ನಗಣ್ಯವಾಗಿರುತ್ತದೆ. ಅಲ್ಲದೆ ಅವರಿಗೆ ದೊರಕುವ ಸಂಪತ್ತಿನ ಸೌಲಭ್ಯಗಳು ಕಡಿಮೆಯಾಗಿರುತ್ತದೆ.

ಆದುದರಿಂದ ಬಡಜನರು ಸ್ವ-ಉದ್ಯೋಗ ಕೈಗೊಳ್ಳಲು ಕಡಿಮೆ ಬಡ್ಡಿ ದರದಲ್ಲಿ ಅವರಿಗೆ ಸಾಲ ಸೌಲಭ್ಯಗಳನ್ನು ಒದಗಿಸುವುದು ಗ್ರಾಮೀಣ ಅಭಿವೃದ್ಧಿಯ ಮುಖ್ಯ ಗುರಿಯಾಗಿದೆ. ಗ್ರಾಮೀಣ ಕ್ಷೇತ್ರದಲ್ಲಿ ಅಭಿವೃದ್ಧಿಯನ್ನು ಸಾಧಿಸಲು ಮತ್ತು ಸಾಮಾಜಿಕ ಉದ್ಧಾರಕ್ಕೆ ಉದ್ಯೋಗವು ಒಂದು ಜೀವಾಳವಿದ್ದಂತೆ ಅದಕ್ಕಾಗಿ, ಪ್ರತಿಯೊಂದು ದೇಶವು ಪರಿಣಾಮಕಾರಿ ಉದ್ಯೋಗ ನೀತಿಯನ್ನು ಜಾರಿಗೊಳಿಸಲು ಗಮನ ಹರಿಸಬೇಕು. ಒಂದು ದೇಶವು ತನ್ನ ಮಾನವ ಸಂಪನ್ಮೂಲಗಳನ್ನು ಸಂಪೂರ್ಣವಾಗಿ ಬಳಕೆ ಮಾಡಿಕೊಳ್ಳದಿದ್ದರೆ, ಆರ್ಥಿಕ ದೃಷ್ಟಿಯಲ್ಲಿ ಆ ದೇಶವು ಏನನ್ನೂ ಸಾಧಿಸಲು ಸಾಧ್ಯವಾಗುವುದಿಲ್ಲ ಆದ್ದರಿಂದ ಗ್ರಾಮೀಣ ಪ್ರದೇಶದಲ್ಲಿ ಉದ್ಯೋಗ ಸೃಷ್ಟಿಸುವುದು ಗ್ರಾಮೀಣ ಅಭಿವೃದ್ಧಿಯ ಉದ್ದೇಶವಾಗಿದೆ.

ಗ್ರಾಮೀಣ ಅಭಿವೃದ್ಧಿಯು ಮಾನವತಾವಾದದ ತತ್ವಗಳನ್ನು ಅಳವಡಿಸಿಕೊಂಡಿದೆ. ಮೂಲತಃ ದಲಿತರ, ದುರ್ಬಲರ ಶೋಷಣೆಯ ವಿರುದ್ಧವಾಗಿ ಹೋರಾಡುತ್ತದೆ. ಬಡವರ ಉದ್ಧಾರ ಮತ್ತು ನೆಮ್ಮದಿಯ ಬದುಕಿನ ಮಾರ್ಗವನ್ನು ತೋರಿಸುತ್ತ ಅವರನ್ನು ಮುನ್ನಡೆಸುವ ಸ್ವಭಾವನ್ನು ಹೊಂದಿದೆ. ದುರ್ಬಲರ ಮೇಲೆ ನಡೆಯುತ್ತಿರುವ ಅನ್ಯಾಯವನ್ನು ಹೋಗಲಾಡಿಸಿ ಅವರು ನೆಮ್ಮದಿಯಿಂದ ಬದುಕುವ ಹಕ್ಕನ್ನು ಒದಗಿಸುವುದು ಗ್ರಾಮೀಣಾಭಿವೃದ್ಧಿಯ ಧ್ಯೇಯವಾಗಿದೆ. ಅದಲ್ಲದೆ ಗ್ರಾಮೀಣ ಮೂಲಭೂತ ಸೇವಾ ಸೌಲಭ್ಯಗಳಾದ ಶಿಕ್ಷಣ, ಪ್ರಾಥಮಿಕ ಆರೋಗ್ಯ ಸೇವೆಗಳು, ಕುಡಿಯುವ ನೀರು

ಪೂರೈಕೆ, ಶೌಚಾಲಯಗಳ ನಿರ್ಮಾಣ, ವಿದ್ಯುತ್ ದೀಪ, ರಸ್ತೆಗಳು, ವಸತಿ ಸೌಕರ್ಯಗಳು, ಮಾರುಕಟ್ಟೆಗಳು, ಉತ್ಪಾದನೆ ಮತ್ತು ಹಂಚಿಕೆಯಲ್ಲಿ ದಕ್ಷತೆ ಮತ್ತು ಸಾಮಾಜಿಕ ನ್ಯಾಯ, ಸಮಾನತೆಯನ್ನು ಸಾಧಿಸುವುದು ಗ್ರಾಮೀಣಾಭಿವೃದ್ಧಿಯ ಮುಖ್ಯ ಉದ್ದೇಶಗಳಾಗಿವೆ.

ಈ ಅರ್ಥದಲ್ಲಿ ಗ್ರಾಮೀಣ ಅಭಿವೃದ್ಧಿಯು ಸಮಗ್ರ ಮತ್ತು ಬಹುರೂಪಿ ಆಯಾಮವಿರುವಂಥದ್ದು ಆಗಿದೆ. ಗ್ರಾಮೀಣಾಭಿವೃದ್ಧಿಯು ಕೃಷಿ ಮತ್ತು ಪೂರಕ ಚಟುವಟಿಕೆಗಳ ಅಭಿವೃದ್ಧಿಯನ್ನು ಒಳಗೊಂಡಿದೆ. ಅದಲ್ಲದೆ ಗುಡಿ ಮತ್ತು ಸಣ್ಣ ಪ್ರಮಾಣದ ಕೈಗಾರಿಕೆಗಳನ್ನೂ, ಸಾಂಪ್ರದಾಯಿಕ ಕಲೆಗಳನ್ನೂ, ಸಾಮಾಜಿಕ ಆರ್ಥಿಕ ಮೂಲಭೂತ ಸೇವಾ ಸೌಲಭ್ಯಗಳ ಉನ್ನತೀಕರಣವನ್ನು ಒಳಗೊಳ್ಳುತ್ತದೆ. ಒಟ್ಟಿನಲ್ಲಿ ಗ್ರಾಮೀಣ ಪ್ರದೇಶಗಳ ಆರ್ಥಿಕಾಭಿವೃದ್ಧಿ ಮತ್ತು ಮಾನವಾಭಿವೃದ್ಧಿ ಗರಿಷ್ಠ ಪ್ರಮಾಣದಲ್ಲಿ ನಿರಂತರವಾಗಿ ಸಾಧಿಸುವುದು ಗ್ರಾಮೀಣ ಅಭಿವೃದ್ಧಿ ಕ್ರಿಯೆಯ ಮೂಲ ಆಶಯವಾಗಿದೆ.

ಗ್ರಾಮೀಣ-ಜನರಿಗೆ-ಸಾಮಾನ್ಯ ಶಿಕ್ಷಣವನ್ನು ಒದಗಿಸುವುದು ಅತೀ ಅವಶ್ಯಕವಾಗಿದೆ. ಗ್ರಾಮೀಣ ಸಮುದಾಯದ ಜನರಿಗೆ ಶಿಕ್ಷಣ ಒದಗಿಸುವುದರಿಂದ ಅವರಿಗೆ ವೈಯಕ್ತಿಕ ಗ್ರಾಮ ಮತ್ತು ದೇಶದ ಸಮಸ್ಯೆಯನ್ನು ತಿಳಿದುಕೊಳ್ಳುವುದು ಸಾಧ್ಯವಾಗುತ್ತದೆ. ಗ್ರಾಮ ಸಮಸ್ಯೆಗಳನ್ನು ಕೇವಲ ಸರಕಾರವೇ ಬಗೆಹರಿಸಲು ಸಾಧ್ಯವಾಗದು. ಗ್ರಾಮ ಜನರಿಗೆ ಶಿಕ್ಷಣ ಒದಗಿಸುವುದರ ಮುಖಾಂತರ ಸ್ವಸಹಾಯ ಪದ್ಧತಿಯನ್ನು ಕಲ್ಪಿಸುವುದು ಮತ್ತು ಅವರು ತಮ್ಮ ಸಮಸ್ಯೆಗಳಿಗೆ ತಾವೇ ಪರಿಹಾರ ಹುಡುಕಲು ಸಮರ್ಥರಾಗುವಂತೆ ಮಾಡಲು ಶಿಕ್ಷಣದ ಅಗತ್ಯವಿದೆ. ಗ್ರಾಮಗಳು ಆದಿ–ಅನಾದಿ ಕಾಲದಿಂದಲೂ ಬೆಳೆದು ಬಂದ ಪರಂಪರೆಗಳನ್ನೇ ಇನ್ನೂ ಮುಂದುವರೆಸಿಕೊಂಡು ಬರುತ್ತಿದ್ದಾರೆ. ಮೂಢನಂಬಿಕೆಗಳು ಮತ್ತು ಅರ್ಥಹೀನ ಸಂಪ್ರದಾಯಗಳು ತಮ್ಮ ಆಗಾಧವಾದ ಪ್ರಭಾವನ್ನು ಗ್ರಾಮೀಣ ಸಮಾಜದ ಮೇಲೆ ಬೀರಿದ್ದು ಕಂಡು ಬರುತ್ತದೆ. ಸ್ತ್ರೀಯರಿಗೆ ಪುರಷರಷ್ಟೇ ಸಮಾನವಾದ ಸ್ಥಾನಮಾನಗಳು ಇನ್ನೂ ದೊರಕಿಲ್ಲ ಇದರಿಂದ ಗ್ರಾಮೀಣ ಅಭಿವೃದ್ಧಿಯು ಕುಂಠಿತಗೊಳ್ಳುತ್ತಿದೆ. ಮಹಿಳೆಯರ ಸ್ಥಾನಮಾನಗಳನ್ನು ಉತ್ತಮಗೊಳಿಸಿ ಎಲ್ಲಾ ಕ್ಷೇತ್ರಗಳಲ್ಲಿ ಮಾನ್ಯತೆ ದೊರಕುವಂತೆ ಮಾಡುವುದು ಗ್ರಾಮೀಣಾಭಿವೃದ್ಧಿಯ ಮುಖ್ಯ ಉದ್ದೇಶಗಳಾಗಿವೆ.

## ಗ್ರಾಮೀಣ ಸಮಸ್ಯೆಗಳು :

ಭಾರತ ಕೃಷಿ ಪ್ರಧಾನ ದೇಶ. ಶೇಕಡಾ ೭೫ ಕ್ಕಿಂತಲೂ ಹೆಚ್ಚಿನ ಜನರು ಗ್ರಾಮೀಣ ಪ್ರದೇಶಗಳಲ್ಲಿ ವಾಸಿಸುತ್ತಿದ್ದಾರೆ. ಹಳ್ಳಿಗಳು ಅಳಿದರೆ ದೇಶವೂ ಅಳಿಯುತ್ತದೆ. ಗ್ರಾಮಗಳ ಸರ್ವಾಂಗೀಣ ಅಭಿವೃದ್ಧಿಯ ಮೇಲೆ ದೇಶದ ಅಭಿವೃದ್ಧಿ ಅವಲಂಬಿತವಾಗಿದೆ ಸ್ವತಂತ್ರ ಭಾರತದ ೫೫ ವರ್ಷಗಳ

ಯೋಜನಾವಧಿಯಲ್ಲಿ ಭಾರತದ ಐದೂವರೆ ಲಕ್ಷ ಹಳ್ಳಿಗಳು ನಿರೀಕ್ಷಿತ ಅಭಿವೃದ್ಧಿಯನ್ನು ಕಂಡಿಲ್ಲ. ನಗರಗಳು ಬೆಳೆಯುತ್ತಲೇ ಇವೆ. ಗ್ರಾಮೀಣ ಪ್ರದೇಶದ ಬಹುಪಾಲು ಜನತೆ ಅಜ್ಞಾನ, ಬಡತನ, ನಿರುದ್ಯೋಗ, ಅನಕ್ಷರತೆ, ಅಸಮರ್ಪಕ ವಸತಿ ಸೌಲಭ್ಯ, ಆರೋಗ್ಯ ಸೌಲಭ್ಯಗಳ ಕೊರತೆ, ನೈರ್ಮಲ್ಯದ ಅಲಕ್ಷತೆ , ಮಾನಸಿಕ ಅಶಾಂತಿ, ಅಸಹಾಯಕತೆ, ಅಪೌಷ್ಟಿಕತೆ ಮುಂತಾದ ಸಮಸ್ಯೆಗಳಿಂದ ಬಳಲುತ್ತಿದ್ದಾರೆ. ಗ್ರಾಮಗಳ ಆರ್ಥಿಕ ಆಧಾರಗಳು ನೆಲೆತಪ್ಪಿ ನಗರಾಭಿಮುಖ ಹಿತಾಸಕ್ತಿಗಳ ಶೋಷಣೆಗೆ ಬಲಿಯಾಗಿವೆ. ಉತ್ಪಾದಿತ ಸಂಪತ್ತೆಲ್ಲವೂ ಕೆಲವೇ ಶ್ರೀಮಂತರಲ್ಲಿ ಕೇಂದ್ರೀಕೃತವಾಗುತ್ತಿದೆ. ಗ್ರಾಮೀಣ ಪ್ರದೇಶದ ಜನರ ಸ್ಥಿತಿಗತಿಯು ಹದಗೆಟ್ಟಿದೆ. ಜನರಿಗೆ ಸರಿಯಾದ ಆರ್ಥಿಕ, ಸಾಮಾಜಿಕ ಮತ್ತು ಶೈಕ್ಷಣಿಕ ಸವಲತ್ತುಗಳು ದೊರೆಯುತ್ತಿಲ್ಲ. ಗ್ರಾಮೀಣ ಪ್ರದೇಶಗಳ ಸರ್ವತೋಮುಖ ಅಭಿವೃದ್ಧಿಗಾಗಿ ಕೇಂದ್ರ ಹಾಗೂ ರಾಜ್ಯ ಸರಕಾರಗಳು ನಾನಾ ರೀತಿಯ ಕಾರ್ಯಕ್ರಮಗಳನ್ನು ಅನುಷ್ಠಾನಗೊಳಿಸಿದರೂ ಗ್ರಾಮೀಣ ಪ್ರದೇಶದಲ್ಲಿನ ಸಮಸ್ಯೆಗಳನ್ನು ಬಗೆಹರಿಸಲು ಸಾಧ್ಯವಾಗಿಲ್ಲ.

ಗ್ರಾಮೀಣ ಪ್ರದೇಶಗಳು ಪ್ರಮುಖವಾದ ಮೂಲಭೂತ ಸೇವಾ ಸೌಲಭ್ಯಗಳ ತೀವ್ರ ಕೊರತೆಯಿಂದ ಬಳಲುತ್ತಿವೆ. ರಸ್ತೆಗಳು, ಮಾರುಕಟ್ಟೆಗಳು, ಆರೋಗ್ಯ ಸೇವೆಗಳು, ಶಿಕ್ಷಣ ಕುಡಿಯುವ ನೀರು ಪೂರೈಕೆ, ಶೌಚಾಲಯ, ವಿದ್ಯುತ್ ಪೂರೈಕೆ ಮುಂತಾದ ಸೌಲಭ್ಯಗಳಿಂದ ಗ್ರಾಮೀಣ ಪ್ರದೇಶದ ಜನರು ವಂಚಿತರಾಗಿದ್ದಾರೆ. ಗ್ರಾಮೀಣ ಪ್ರದೇಶದಲ್ಲಿ ಗ್ರಾಮೀಣ ಅನಭಿವೃದ್ಧಿ ಮತ್ತು ಅಪೂರ್ಣಾಭಿವೃದ್ಧಿಯು ವ್ಯಾಪಕವಾಗಿದೆ. ಹೀಗಾಗಿ ಗ್ರಾಮೀಣ ಬಡತನ ಮತ್ತು ನಿರುದ್ಯೋಗದ ಸಮಸ್ಯೆಗಳು ತೀವ್ರವಾಗಿದೆ.ಇದರಿಂದ ಗ್ರಾಮೀಣ ಪ್ರದೇಶದ ಜನರು ನಗರಾಭಿಮುಖವಾಗಿ ವಲಸೆ ಹೋಗುತ್ತಿದ್ದಾರೆ. ನಗರ ಪ್ರದೇಶಗಳ ಕೊಳೆಗೇರಿಗಳ ಬಹುಪಾಲು ಜನತೆ ಗ್ರಾಮೀಣ ವಲಸಿಗರಿಂದಲೇ ಕೂಡಿರುತ್ತದೆ. ಹೀಗೆ ಗ್ರಾಮೀಣ ಪ್ರದೇಶದ ಜನವಲಸೆಯು ನಗರಗಳಿಗೆ ಅಗ್ಗದ ಕಾರ್ಮಿಕರನ್ನು ಪೂರೈಸುತ್ತದೆ. ಕಾರ್ಮಿಕರು ಕಡಿಮೆ ವೇತನವನ್ನು ಗಳಿಸುತ್ತಿದ್ದಾರೆ. ಗ್ರಾಮೀಣ ಕಾರ್ಮಿಕ ಪೇಟೆಯು ಸಂಕೀರ್ಣವಾಗಿದೆ. ಅದು ಜೀತ ಕಾರ್ಮಿಕ ಪದ್ಧತಿಯನ್ನು ತೀರಾ ಇತ್ತೀಚಿನವರೆಗೂ ಹೊಂದಿತ್ತು. ಗ್ರಾಮೀಣ ಪ್ರದೇಶಗಳಲ್ಲಿ ಬಾಲ ಕಾರ್ಮಿಕರ ಪದ್ಧತಿ ಇನ್ನೂ ಜೀವಂತವಿದೆ. ಮಹಿಳೆಯರು ಮತ್ತು ಭೂರಹಿತ ಕೃಷಿ ಕಾರ್ಮಿಕರು ಸಣ್ಣ ಮತ್ತು ಅತೀ ಸಣ್ಣ ರೈತರು ಕೃಷಿ ಆರ್ಥಿಕತೆಗೆ ಕೂಲಿಯಾಳುಗಳಾಗಿ ದೊರಕುತ್ತಾರೆ. ಈ ತೆರನಾದ ಸಾಮಾಜಿಕ, ಆರ್ಥಿಕ ಪರಿಸ್ಥಿತಿಗಳು ಜನಸಂಖ್ಯಾ ಒತ್ತಡದೊಂದಿಗೆ ಸೇರಿ ಗ್ರಾಮೀಣ ಸಮಸ್ಯೆಗಳನ್ನು ಹುಟ್ಟು ಹಾಕುತ್ತವೆ.

ಅನೇಕ ವಿಕಾಸಶೀಲ ದೇಶಗಳಲ್ಲಿ ಪರಿಸರ ಸಂಪನ್ಮೂಲಗಳ ದುರ್ಬಳಕೆಯಿಂದ ನೈಸರ್ಗಿಕ ಸಂಪನ್ಮೂಲಗಳನ್ನು ಅವೈಚಾರಿಕವಾಗಿ ಬಳಸಲಾಗುತ್ತಿದೆ. ಈ ಸಮಸ್ಯೆಯನ್ನು ಗ್ರಾಮೀಣ

ಪ್ರದೇಶಗಳಲ್ಲೂ ಕಾಣಬಹುದು. ಗ್ರಾಮೀಣ ಪ್ರದೇಶದಲ್ಲಿ ಪ್ರಾದೇಶಿಕ ಅಸಮತೋಲನದ ಸಮಸ್ಯೆಗಳಿವೆ. ಗ್ರಾಮೀಣ ಕೈಗಾರಿಕೆಗಳ ಬೆಳವಣಿಗೆ ಮತ್ತು ವಿವಿಧ ಕ್ಷೇತ್ರಗಳ ಅಸಮತೋಲನವು ಪ್ರಾದೇಶಿಕ ಅಸಮಾನತೆಗೆ ಕಾರಣವಾಗಿದೆ. ಅದಲ್ಲದೆ ಗ್ರಾಮೀಣ ಸಾಲ ವ್ಯವಸ್ಥೆ ಮತ್ತು ಕೃಷಿ ಮಾರುಕಟ್ಟೆಗಳು ಅಪರಿಪೂರ್ಣವಾಗಿದೆ ಇದರಿಂದ ರೈತರು, ವ್ಯಾಪಾರಿಗಳು ಮತ್ತು ಇತರೆ ದುಡಿಯುವ ವರ್ಗಗಳು ಶೋಷಣೆಯನ್ನು ಅನುಭವಿಸುತ್ತಿದಾರೆ.

ಗ್ರಾಮೀಣ ಸಮಾಜಗಳ ಪಾರಂಪರಿಕವಾದ ಜೀವನ ಮೌಲ್ಯಗಳು, ನಂಬಿಕೆಗಳು, ಆಚಾರ ವಿಚಾರಗಳು, ಗ್ರಾಮೀಣ ಅಭಿವೃದ್ಧಿಗೆ ಪೂರಕವಾಗಿಲ್ಲ. ಗ್ರಾಮೀಣ ಸಮಾಜಗಳು ವಿಭಿನ್ನವಾದ ಸಾಮಾಜಿಕ ಮತ್ತು ಸಾಂಸ್ಕೃತಿಕ ಮೌಲ್ಯಗಳಿಂದ ವಿಭಜಿತಗೊಂಡಿದೆ. ಗ್ರಾಮೀಣ ಪ್ರದೇಶದಲ್ಲಿನ ಮೂಢನಂಬಿಕೆಗಳು, ಜಾತಿ ಪದ್ಧತಿ ಮತ್ತು ಧಾರ್ಮಿಕ ವೈಷಮ್ಯಗಳು, ಗ್ರಾಮೀಣ ಶಾಂತಿ, ಸಹಬಾಳ್ವೆ ಮತ್ತು ಒಗ್ಗಟ್ಟನ್ನು ನಾಶಪಡಿಸುತ್ತಿದೆ. ಗ್ರಾಮಗಳು ಸಾಮಾಜಿಕವಾಗಿ, ನೈತಿಕವಾಗಿ ಮತ್ತು ಸಾಂಸ್ಕೃತಿಕವಾಗಿ ವಿಘಟನೆಯಾಗುತ್ತಿವೆ.

ಗ್ರಾಮೀಣ ಜನರು ತಮ್ಮ ಆದಾಯವನ್ನು ಮೀರಿ ಖರ್ಚು ಮಾಡುತ್ತಿದ್ದಾರೆ. ಈ ಮೂಲಕ ಗ್ರಾಮೀಣ ಜನರ ಸಾಲದ ಹೊರೆ ಹೆಚ್ಚಾಗುತ್ತಿದೆ. ನಗರ ಜನರ ಜೀವನ ಶೈಲಿಯನ್ನು ಗ್ರಾಮೀಣ ಪ್ರದೇಶದ ಜನರು ಅನುಕರಣೆ ಮಾಡುತ್ತಿದ್ದಾರೆ. ಆರ್ಥಿಕ ಮತ್ತು ರಾಜಕೀಯ ಕಾರಣಗಳಿಂದಾಗಿ ಗ್ರಾಮೀಣ ಸಮಾಜಗಳ ಹಿಂಸೆ ಹೆಚ್ಚುತ್ತಿವೆ. ಪ್ರತೀಕಾರ ಮತ್ತು ದ್ವೇಷದ ಹಿನ್ನಲೆಯು ಗುಂಪು ದೊಂಬಿ ಪ್ರಕರಣಗಳನ್ನು ಸೃಷ್ಟಿಸುತ್ತಿವೆ. ಗ್ರಾಮೀಣ ಪ್ರದೇಶಗಳಲ್ಲಿ ಪಾರಂಪರಿಕ ನ್ಯಾಯದಾನ ಕುಸಿದಿದೆ. ಹೀಗೆ ಎಲ್ಲರೂ ತಮ್ಮ ವ್ಯಾಜ್ಯಗಳನ್ನು ಪರಿಹರಿಸಿಕೊಳ್ಳಲು ನ್ಯಾಯಾಲಯಗಳನ್ನು ಆಶ್ರಯಿಸುತ್ತಿದ್ದಾರೆ.

ಭಾರತ ಎದುರಿಸುತ್ತಿರುವ ಅನೇಕ ಸಮಸ್ಯೆಗಳಲ್ಲಿ ಬಡತನವೂ ಒಂದಾಗಿದೆ. ಕಳೆದ ೫ ದಶಕಗಳ ಆರ್ಥಿಕ ಯೋಜನೆಗಳ ಫಲವಾಗಿಯೂ ಬಡತನ ಸಮಸ್ಯೆ ಗಂಭೀರವಾಗಿಯೇ ಉಳಿದುಕೊಂಡಿದೆ. ಗ್ರಾಮೀಣ ಜನರು ತಮ್ಮ ಭವಿಷ್ಯವನ್ನೇ ಕಾಣದಂತಹ ಸ್ಥಿತಿಯಲ್ಲಿದ್ದಾರೆ. ಬಡತನವನ್ನು ಅಳೆಯಲು ಸರಕಾರ ಬಡತನ ರೇಖೆ ಎಂಬ ಮಾಪನವನ್ನು ಜಾರಿಗೆ ತಂದಿದೆ. ಈ ಮಾಪನದ ಪ್ರಕಾರ ಒಬ್ಬ ವ್ಯಕ್ತಿ ದಿನವೊಂದರಲ್ಲಿ ಎರಡು ಹೊತ್ತಿನ ಊಟಕ್ಕೆ ಪರದಾಡುತ್ತಿದ್ದರೆ ಆತನನ್ನು ಬಡತನ ರೇಖೆಗಿಂತ ಕೆಳಗಿರುವನೆಂದು ನಿರ್ಧರಿಸಲಾಗುತ್ತದೆ. ಆದರೆ ಬಡತನ ಎಂಬ ಪರಿಕಲ್ಪನೆಯನ್ನು ಒಂದು ನಿರ್ಧಿಷ್ಟ ಮಾಪನದಿಂದ ಅಳೆಯುವುದು ಸಾಧ್ಯವಿಲ್ಲದ ಮಾತಾಗಿದೆ.

ಭಾರತದಲ್ಲಿ ಬಡತನ ಲೆಕ್ಕಚಾರಕ್ಕೆ ಯಾವುದೇ ರೀತಿಯ ಪ್ರಯತ್ನಗಳು ನಡೆದಿಲ್ಲ. ಇದರಿಂದಾಗಿ ಗ್ರಾಮೀಣ ಬಡತನದ ಬಗ್ಗೆ ಸರಿಯಾದ ಅಂಕಿ ಅಂಶಗಳು ಲಭ್ಯವಾಗಿಲ್ಲ. ಇದರಿಂದ ಬಡತನ ನಿರ್ಮೂಲನೆಗಾಗಿ ಸರಕಾರಕ್ಕೆ ಸರಿಯಾದ ಯೋಜನೆಗಳನ್ನು ರೂಪಿಸಲು ಸಾಧ್ಯವಾಗಿಲ್ಲ.

## ೨.೩ ಸರ್ಕಾರೇತರ ಸಂಸ್ಥೆಗಳ ಬಗ್ಗೆ ಸಾಹಿತ್ಯ ಸಮೀಕ್ಷೆ:

### ಸರ್ಕಾರೇತರ ಸಂಸ್ಥೆಗಳ ಬಗ್ಗೆ ನಿರೂಪಣೆ:

ಗ್ರಾಮೀಣಾಭಿವೃದ್ಧಿಯಂತಹ ವಿಶಾಲ ಕ್ಷೇತ್ರದಲ್ಲಿ ಸರಕಾರದ ಪ್ರಯತ್ನಗಳು ಬಡತನ ಮತ್ತು ನಿರುದ್ಯೋಗದಂತಹ ಅತಿ ಪ್ರಾಮುಖ್ಯವಾದ ಸಮಸ್ಯೆಗಳನ್ನು ನಿವಾರಿಸಲು ಸಾಕಾಗುವುದಿಲ್ಲ. ಗ್ರಾಮೀಣಾಭಿವೃದ್ಧಿಯು ಚಾಲ್ತಿಯಲ್ಲಿರುವ ಅಭಿವೃದ್ಧಿ ಪ್ರಯತ್ನಗಳ ನಿರಂತರ ಮುಂದುವರಿಕೆಯನ್ನು ಒಳಗೊಂಡಿರುವುದರಿಂದ, ಅದೊಂದು ಸಂಕೀರ್ಣ ಪ್ರಕ್ರಿಯೆಯಾಗಿದೆ ಸರಕಾರದ ಬಳ ಲಭ್ಯವಿರುವ ಅನುದಾನವು ಸೀಮಿತವಾದದು. ಅಲ್ಲದೆ ಅಧಿಕಾರಶಾಹಿಯ ಹಲವಾರು ಕೊರತೆಗಳಿಂದ ಬಳಲುತ್ತಿದೆ ಮತ್ತು ವಿವಿಧ ಕಾರ್ಯಕ್ರಮಗಳ ಮೂಲಕ ಗ್ರಾಮೀಣ ಪುನರ್ ನಿರ್ಮಾಣದ ಭಾರೀ ಕೆಲಸವನ್ನು ಏಕಾಂಗಿಯಾಗಿ ಕೈಗತ್ತಿಕೊಳ್ಳಲು ಅದರಿಂದ ಸಾಧ್ಯವಿಲ್ಲ. ಆದುದರಿಂದ ಇಂತಹ ಸಮಸ್ಯೆಗಳನ್ನು ಹೋಗಲಾಡಿಸುವಲ್ಲಿ ಸರಕಾರೇತರ ಸಂಸ್ಥೆಗಳು ಪ್ರಮುಖ ಪಾತ್ರವಹಿಸುತ್ತವೆ.

**ಜೋಮನ್ ಎಂ.ಜಿ ಈ ಮತ್ತು ಮಾಧವಿ ಮೆಹತಾರವರು,** ಸರ್ಕಾರೇತರ ಸಂಸ್ಥೆಗೆ ಕಾರ್ಯ ನಿರ್ವಹಿಸುವ ಮಾನವ ಅಭಿವೃದ್ಧಿ ಸಂಸ್ಥೆಯ ಸಹಯೋಗದೊಂದಿಗೆ, ಸರ್ಕಾರೇತರ ಸಂಸ್ಥೆಗಳ ಕಾರ್ಯ ನಿರ್ವಹಣೆ ಮತ್ತು ದೃಷ್ಟಿಕೋನಗಳ ಬಗ್ಗೆ ಒಂದು ಅಧ್ಯಯನ ನಡೆಸಿದ್ದಾರೆ. ಈ ಅಧ್ಯಯನದ ಪ್ರಕಾರ ಎಲ್ಲಾ ಸರ್ಕಾರೇತರ ಸಂಸ್ಥೆಗಳು ತಮ್ಮದೇ ಆದ ಸ್ವಂತ ದೃಷ್ಟಿಕೋನ ಮತ್ತು ಉದ್ದೇಶಗಳನ್ನು ಹೊಂದಿರುತ್ತದೆ.ಈ ದೃಷ್ಟಿಕೋನ ಮತ್ತು ಉದ್ದೇಶಗಳು ಸಮಯಕ್ಕನುಸಾರವಾಗಿ ಬದಲಾಗುತ್ತವೆ. ಈ ಅಧ್ಯಯನದ ಪ್ರಕಾರ ಸಂಸ್ಥೆಯು ಉತ್ತಮವಾಗಿ ಕಾರ್ಯ ನಿರ್ವಹಿಸಬೇಕಾದರೆ, ಉದ್ದೇಶ ಮತ್ತು ದೃಷ್ಟಿಕೋನಗಳನ್ನು ಸದಸ್ಯರು ಮತ್ತು ಜನರೊಡನೆ ಚರ್ಚಿಸಬೇಕಾಗುತ್ತದೆ.

ಆದರೆ ಪ್ರಸ್ತುತ ಈ ಅಧ್ಯಯನದಲ್ಲಿ ದಕ್ಷಿಣಕನ್ನಡ ಜಿಲ್ಲೆಯ ಸರ್ಕಾರೇತರ ಸಂಸ್ಥೆಗಳ ಕಾರ್ಯ ನಿರ್ವಹಣೆ ಬಗ್ಗೆ ಅಧ್ಯಯನ ಮಾಡಲಾಗುವುದು.

**ಸ್ವಾಪನ್ ಗ್ಯಾರೈನ್‌ರವರ ಅಧ್ಯಯನದ ಪ್ರಕಾರ,** ಸರ್ಕಾರೇತರ ಸಂಸ್ಥೆಗಳು ಗ್ರಾಮೀಣ ಜನರ ಅಭಿವೃದ್ಧಿ ಜೊತೆಗೆ ನೈಸರ್ಗಿಕ ಕೃಷಿ ತರಬೇತಿ, ಸರಕಾರದ ಸವಲತ್ತುಗಳ ಬಗ್ಗೆ ಸಲಹೆಗಳನ್ನು ನೀಡಿ ಗ್ರಾಮೀಣ ಅಭಿವೃದ್ಧಿಗೆ ಸಹಕರಿಸುತ್ತದೆ.

ಪ್ರಸ್ತುತ ಅಧ್ಯಯನ ಮತ್ತು ಈ ಅಧ್ಯಯನವು ನೇರವಾದ ಸಂಬಂಧವನ್ನು ಹೊಂದಿದೆ.ಆದರೆ ಪ್ರಸ್ತುತ ಈ ಅಧ್ಯಯನದಲ್ಲಿ ದಕ್ಷಿಣಕನ್ನಡ ಜಿಲ್ಲೆಯ ಸರ್ಕಾರೇತರ ಸಂಸ್ಥೆಗಳ ಕಾರ್ಯ ನಿರ್ವಹಣೆ ಮತ್ತು ಗ್ರಾಮೀಣ ಅಭಿವೃದ್ಧಿಯ ಬಗ್ಗೆ ಅಧ್ಯಯನವನ್ನು ಮಾಡಲಾಗುವುದು.

**ಅಜಯ್ ಎಸ್ ಮೆಹತಾರವರ** ಅಧ್ಯಯನದ ಪ್ರಕಾರ ಉದಯಪುರದ ಎರಡು ಹಳ್ಳಿಗಳಾದ ನಾಯಕೇಡ ಮತ್ತು ಶ್ಯಾಮಪುರದ ಪ್ರಜಾಪ್ರಭುತ್ವ ಮತ್ತು ಅಭಿವೃದ್ಧಿಗೆ ಸೇವಾ ಮಂದಿರ ಎಂಬ ಸರ್ಕಾರೇತರ ಸಂಸ್ಥೆಯು ಹೆಚ್ಚಿನ ಪಾತ್ರ ವಹಿಸಿದೆ. ಇದರ ಪ್ರಕಾರ ಗ್ರಾಮೀಣ ಜನರ ಶಕ್ತಿಯನ್ನು ಒಗ್ಗೂಡಿಸಲು ಸರ್ಕಾರೇತರ ಸಂಸ್ಥೆಗಳು ಹಿಚ್ಚಿನ ಸಹಕಾರವನ್ನು ನೀಡುತ್ತವೆ.

ಪ್ರಸ್ತುತ ಅಧ್ಯಯನ ಮತ್ತು ಈ ಅಧ್ಯಯನವು ನೇರವಾದ ಸಂಬಂಧವನ್ನು ಹೊಂದಿದೆ. ಆದರೆ ಪ್ರಸ್ತುತ ಈ ಅಧ್ಯಯನದಲ್ಲಿ ದಕ್ಷಿಣಕನ್ನಡ ಜಿಲ್ಲೆಯ ಸರ್ಕಾರೇತರ ಸಂಸ್ಥೆಗಳ ಕಾರ್ಯ ನಿರ್ವಹಣೆ ಮತ್ತು ಗ್ರಾಮೀಣ ಅಭಿವೃದ್ಧಿಯ ಬಗ್ಗೆ ಅಧ್ಯಯನವನ್ನು ಮಾಡಲಾಗುವುದು.

## ೨.೪ ಗ್ರಾಮೀಣಾಭಿವೃದ್ಧಿಯಲ್ಲಿ ಸರ್ಕಾರೇತರ ಸಂಸ್ಥೆಗಳ ಮಹತ್ವ :

ಗ್ರಾಮೀಣಾಭಿವೃದ್ಧಿಯಲ್ಲಿ ಸರ್ಕಾರೇತರ ಸಂಸ್ಥೆಗಳು ಮಹತ್ವದ ಪಾತ್ರವಹಿಸುತ್ತದೆ. ಸರ್ಕಾರೇತರ ಸಂಸ್ಥೆಗಳನ್ನು ಲಾಭರಹಿತ ಸಂಸ್ಥೆಗಳೆಂದು ಕರೆಯುತ್ತಾರೆ. ಸರ್ಕಾರೇತರ ಸಂಸ್ಥೆಗಳು ಪ್ರಾಯೋಗಿಕ ದೃಷ್ಟಿಕೋನವನ್ನು ಅಳವಡಿಸಿಕೊಳ್ಳುವುದರಿಂದ ಮತ್ತು ತ್ಯಾಗದ ಸ್ಪೂರ್ತಿಯಿಂದ ಪ್ರಭಾವಿತವಾಗಿರುವುದರಿಂದ, ಅವುಗಳು ಸರಕಾರೀ ಇಲಾಖೆಗಳಗಿಂತ ಹೆಚ್ಚಿನ ಅನುಕೂಲತೆಗಳನ್ನು ಪಡೆದಿವೆ. ಸ್ಥಳೀಯ ಅವಶ್ಯಕತೆಗಳು, ಸಮಸ್ಯೆಗಳು ಮತ್ತು ಸಂಪನ್ಮೂಲಗಳನ್ನು ಅರಿತುಕೊಳ್ಳುವ ಸಾಮಾರ್ಥ್ಯ, ಸ್ಥಳೀಯ ಜನರನ್ನು ಒಳಗೊಳ್ಳುವ ಮತ್ತು ಅವರ ಸಹಕಾರ ಮತ್ತು ಭಾಗವಹಿಸುವಿಕೆಯನ್ನು ಗಳಸುವ ಸಾಮರ್ಥ್ಯ, ಹೆಚ್ಚಿನ ಖರ್ಚನ್ನು ಮಾಡದೆ ಗ್ರಾಮೀಣಾಭಿವೃದ್ಧಿಗೆ ಹೊಸ ಯೋಜನೆಗಳನ್ನು ರೂಪಿಸುವುದು, ಹೊಸ ಕಾರ್ಯಕ್ರಮಗಳು, ನೀತಿಗಳು ಮತ್ತು ವಿಧಾನಗಳೊಂದಿಗೆ ಪ್ರಯೋಗ ನಡೆಸುವ ಹಂಬಲವೇ ಸರ್ಕಾರೇತರ ಸಂಸ್ಥೆಗಳ ಶಕ್ತಿ ಮತ್ತು ಬಲವಾಗಿದೆ.

ಸರ್ಕಾರೇತರ ಸಂಸ್ಥೆಗಳು ನಮ್ಯ ಮತ್ತು ಲೌಕಿಕ ವಿಧಾನವನ್ನು ಅಳವಡಿಸುತ್ತಿದೆ. ಗ್ರಾಮೀಣ ಪ್ರದೇಶದ ವಿಭಿನ್ನ ಸ್ಥಿತಿಗತಿಗಳಿಂದಾಗಿ ಇದನ್ನು ಒಂದು ಪ್ರಯೋಜನವೆಂದೇ ಪರಿಗಣಿಸಲಾಗಿದೆ. ಉನ್ನತ ಮಟ್ಟದ ಪಾಲ್ಗೊಳ್ಳುವಿಕೆ ಮತ್ತು ಬದ್ಧತೆಯೊಂದಿಗೆ ವಿಷಯಗಳನ್ನು ಚರ್ಚಿಸಲಾಗುತ್ತದೆ ಮಾತು ನಿರ್ಧರಿಸಲಾಗುತ್ತದೆ. ಪ್ರಾತಿನಿಧಿಕ ಸಂಸ್ಥೆಗಳಿಗೆ ಬದಲಾಗಿ ಚಟುವಟಿಕೆ ಆಧಾರಿತ ವೇದಿಕೆಗಳಿಗೆ ಹೆಚ್ಚು

ಒತ್ತು ನೀಡಲಾಗುತ್ತದೆ. ಅಂದರೆ ಸರ್ಕಾರೇತರ ಸಂಸ್ಥೆಗಳು ಕೇವಲ ಚಟುವಟಿಕೆ ಆಧಾರಿತ ಮಾತ್ರವಲ್ಲದೆ, ಸೇವೆ ಆಧಾರಿತ ಸಂಸ್ಥೆಗಳು ಆಗಿವೆ.

ಬಹುತೇಕ ಸರ್ಕಾರೇತರ ಸಂಸ್ಥೆಗಳು ತಮ್ಮ ಆಯ್ಕೆಯ ಕ್ಷೇತ್ರಗಳಲ್ಲಿ ಹೆಚ್ಚು ಮಗ್ನವಾಗಿರುತ್ತವೆ. ಒಂದೇ ಕ್ಷೇತ್ರಕ್ಕೆ ಹೆಚ್ಚು ಗಮನ ಹರಿಸಿದರೆ ಉತ್ತಮ ಸೇವೆಯನ್ನು ಒದಗಿಸುವುದು ಸಾಧ್ಯವಾಗಿದೆ. ಸರಕಾರದ ಯೋಜನೆಗಳು ಯಶಸ್ವಿಯಾಗಬೇಕಾದರೆ ಜನರ ಪಾಲ್ಗೊಳ್ಳುವಿಕೆ ಅತೀ ಮುಖ್ಯವಾಗಿರುತ್ತದೆ. ಭಾರತ ಸ್ವಾತಂತ್ರ್ಯ ನಂತರ ಇಂದಿನ ವರೆಗೂ ಅನೇಕ ಗ್ರಾಮ ವಿಕಾಸ ಯೋಜನೆಗಳನ್ನು ಜಾರಿಗೆ ತಂದಿದೆ. ಎನ್. ಜಿ. ಒ ಗಳ ಬೆಳವಣಿಗೆಯ ನಂತರ ಆ ಎಲ್ಲಾ ಯೋಜನೆಗಳು ಯಶಸ್ವಿಯಾಗಲು ಆರಂಭಿಸಿವೆ. ಅಭಿವೃದ್ಧಿ ಯೋಜನೆಗಳಲ್ಲಿ ಜನರ ಪಾಲ್ಗೊಳುವಿಕೆಯ ಪ್ರಮಾಣವು ಹೆಚ್ಚಾಗಿದೆ.

## ಸರ್ಕಾರೇತರ ಸಂಸ್ಥೆಗಳ ವಿಧಗಳು :

### ೧. ಕಾರ್ಯ ನಿರ್ವಹಣೆಯ ಅಥವಾ ತಳಮಟ್ಟದ ಸರ್ಕಾರೇತರ ಸಂಸ್ಥೆಗಳು:

ಈ ಸಂಸ್ಥೆಗಳು ಗ್ರಾಮೀಣ ಜನರಲ್ಲಿಗೆ ನೇರವಾದ ಸಂಬಂಧವನ್ನು ಹೊಂದಿದ್ದು ಅವರ ಸ್ಥಳೀಯ ಅವಶ್ಯಕತೆಗಳನ್ನು ತಿಳಿದು ಅವುಗಳನ್ನು ಪೂರೈಸಲು ಶ್ರಮಿಸುತ್ತವೆ.

### ೨. ಪ್ರೋತ್ಸಾಹಕ ಸರ್ಕಾರೇತರ ಸಂಸ್ಥೆಗಳು :

ಈ ಸಂಸ್ಥೆಗಳು ತಳಮಟ್ಟದ ಎನ್.ಜಿ. ಒ ಗಳ ಕೆಲಸ ನಿರ್ವಹಣೆಯಲ್ಲಿ ಸಹಾಯ ಮಾಡುತ್ತದೆ. ಪ್ರೋತ್ಸಾಹಕ ಸರ್ಕಾರೇತರ ಸಂಸ್ಥೆಗಳು ಸ್ವಯಂ ಸೇವಕರಿಗೆ ತರಬೇತಿಯನ್ನು ನೀಡುವ ಮತ್ತು ಮಾರ್ಗದರ್ಶನವನ್ನು ನೀಡುವ ಕಾರ್ಯವನ್ನು ನಡೆಸುತ್ತದೆ.

### ೩. ಸಂಘಟಿತ ಅಥವಾ ಸಂಪರ್ಕ ಸರ್ಕಾರೇತರ ಸಂಸ್ಥೆಗಳು :

ಇದು ಸಣ್ಣ-ಸಣ್ಣ ಸರ್ಕಾರೇತರ ಸಂಘಟನೆಗಳನ್ನು ಒಂದು ಕಡೆ ಸೇರಿಸಿ ಅವುಗಳ ಕಾರ್ಯಚಟುವಟಿಕೆಗಳ ಬಗ್ಗೆ ಚರ್ಚೆಯನ್ನು ಮಾಡಿ ಅವುಗಳ ಕೆಲಸಗಳಲ್ಲಿ ಸುಧಾರಣೆಯನ್ನು ತರಲು ಪ್ರಯತ್ನಿಸಲಾಗುತ್ತದೆ.

### ೪. ಸಹಾಯ ಧನದ ಸರ್ಕಾರೇತರ ಸಂಸ್ಥೆಗಳು :

ಈ ಸಂಸ್ಥೆಗಳು ತಳಮಟ್ಟದ ಸಂಸ್ಥೆಗಳಿಗೆ ಅಥವಾ ಸಂಘಟನೆಗಳಿಗೆ ಹಣಕಾಸಿನ ಮತ್ತು ಆರ್ಥಿಕ ಸಹಾಯವನ್ನು ನೀಡುತ್ತದೆ.

ಆದುದರಿಂದ ಸರ್ಕಾರೇತರ ಸಂಸ್ಥೆಗಳು ವಿವಿಧ ಯೋಜನೆಗಳನ್ನು ರೂಪಿಸಿ ಗ್ರಾಮೀಣ ಶಿಕ್ಷಣ, ಆರೋಗ್ಯ, ಪೌಷ್ಠಿಕ ಆಹಾರ, ಕುಡಿಯುವ ನೀರು, ಉದ್ಯೋಗ ಸೃಷ್ಟಿ ಮತ್ತು ಪರಿಸರ ರಕ್ಷಣೆ ಈ ರೀತಿಯ ವಿಷಯಗಳಲ್ಲಿ ಅಭಿವೃದ್ಧಿಯನ್ನು ತರಲು ಶ್ರಮಿಸುತ್ತಿದೆ.

## ಸರ್ಕಾರೇತರ ಸಂಸ್ಥೆಗಳ ಪ್ರಾಮುಖ್ಯತೆ ಮತ್ತು ಬದಲಾದ ಪಾತ್ರ:

ಸರ್ಕಾರೇತರ ಸಂಸ್ಥೆಗಳನ್ನು ಸ್ವಯಂ ಸೇವಕ ಸಂಘಗಳು ಎಂದು ಕರೆಯುತ್ತಾರೆ. ಭಾರತದಲ್ಲಿ ಅಪಾರ ಸಂಖ್ಯೆಯ ಸರ್ಕಾರೇತರ ಸಂಸ್ಥೆಗಳು ಅಥವಾ ಲಾಭರಹಿತ ಸಂಸ್ಥೆಗಳು ಕಾರ್ಯಾಚರಿಸುತ್ತಿವೆ. ಬಹುತೇಕ ಸರ್ಕಾರೇತರ ಸಂಸ್ಥೆಗಳು ೧೯೭೦ ರ ದಶಕದಲ್ಲಿಯೇ ಸ್ಥಾಪಿತಗೊಂಡಿದೆ. ಭಾರತದಲ್ಲಿ ಇದರ ಅಸ್ತಿತ್ವ ಹೊಸದೇನಲ್ಲ. ನಮ್ಮ ಸಂಸ್ಕೃತಿಯಲ್ಲಿ ಸೇವೆಯ ಮನೋಭಾವ ಪ್ರಾಚೀನ ಕಾಲದಿಂದಲೂ ರೂಢಿಯಲ್ಲಿತ್ತು. ಗ್ರಾಮೀಣ ಸಮುದಾಯದ ಅಭಿವೃದ್ಧಿಯಲ್ಲಿ ಸಂಘಟನೆಗಳ ಮತ್ತು ಜನರ ಪಾಲ್ಗೊಳ್ಳುವಿಕೆ ಬಹಳ ಪ್ರಮುಖವಾದ ಪಾತ್ರವನ್ನು ವಹಿಸುತ್ತದೆ. ಸರಕಾರವು ಗ್ರಾಮೀಣ ಅಭಿವೃದ್ಧಿಗೆ ಬಡತನದ ನಿರ್ಮೂಲನೆಗೆ ಗ್ರಾಮೀಣ ಜನರ ಸರ್ವಾಂಗೀಣ ಅಭಿವೃದ್ಧಿಗೆ ಸ್ವಾತಂತ್ರದ ನಂತರ ಅನೇಕ ಕೋಟಿ ರೂಪಾಯಿ ಹಣವನ್ನು ವೆಚ್ಚ ಮಾಡಿದರೂ ಗ್ರಾಮೀಣ ಬದುಕು ತನ್ನ ನಿರೀಕ್ಷಿತ ಮಟ್ಟವನ್ನು ತಲುಪದೆ ಪ್ರಗತಿಯು ನಿಧಾನಗತಿಯಲ್ಲಿ ಸಾಗುತ್ತಿದೆ. ಇದನ್ನು ಪರಿಗಣಿಸಿ ಅನೇಕ ಸರ್ಕಾರೇತರ ಸಂಸ್ಥೆಗಳು ಅಸ್ತಿತ್ವಕ್ಕೆ ಬಂದವು.

ಗ್ರಾಮೀಣ ಪುನರ್ ನಿರ್ಮಾಣದ ದೀರ್ಘ ಸರಪಳಿಯಲ್ಲಿ ಯಾವಾಗಲೂ ನ್ಯೂನತೆಗಳು ಇದ್ದೇ ಇವೆ. ಸರ್ಕಾರೇತರ ಸಂಸ್ಥೆಗಳು ಈ ನ್ಯೂನ್ಯತೆಗಳನ್ನು ಸರಿಪಡಿಸುವ ಕೆಲಸ ಮಾಡಬೇಕು. ಗ್ರಾಮೀಣ ಬಡತನ ಮತ್ತು ನಿರುದ್ಯೋಗದ ಸಮಸ್ಯೆಯ ತೀವ್ರತೆಯನ್ನು ಗಮನಿಸಿ ಸರ್ಕಾರ ತನ್ನ ಬಡತನ ವಿರೋಧಿ ಅಭಿಯಾನದಲ್ಲಿ ಸರ್ಕಾರೇತರ ಸಂಸ್ಥೆಗಳನ್ನು ಒಟ್ಟಿಗೆ ಸೇರಿಸುತ್ತಿದೆ.

ಈಗ ಅಸ್ತಿತ್ವದಲ್ಲಿರುವ ಕಾರ್ಯಕ್ರಮಗಳು ಸೀಮಿತ ಯಶಸ್ಸನ್ನು ಸಾಧಿಸಿರುವುದರಿಂದ ಗ್ರಾಮೀಣಾಭಿವೃದ್ಧಿಗೆ ಹೊಸವಿಧಾನವನ್ನು ಕಂಡಕೊಳ್ಳಬೇಕಾಗಿದೆ. ತಳಮಟ್ಟದ ವಾಸ್ತವೀಕತೆಯೊಂದಿಗೆ ಸಂಪರ್ಕ ಹೊಂದಿರುವ ಸರ್ಕಾರೇತರ ಸಂಸ್ಥೆಗಳು ಬಡತನ ಮತ್ತು ನಿರುದ್ಯೋಗದ ಸಮಸ್ಯೆಯನ್ನು ನಿವಾರಿಸುವ ಹೊಸ ನೀತಿಯೊಂದನ್ನು ಅಳವಡಿಸಿಕೊಳ್ಳಲು ಸರ್ಕಾರಕ್ಕೆ ಸಹಾಯ ಮಾಡುತ್ತವೆಯೆಂದು ನಿರೀಕ್ಷಿಸಲಾಗಿದೆ. ಅಲ್ಲದೆ ಅಭಿವೃದ್ಧಿಯೆಂದರೆ ಕೇವಲ ಉತ್ಪಾದನಾ ಉತ್ಪನ್ನದಲ್ಲಿ ಏರಿಕೆ ಮಾತ್ರವಲ್ಲ .ಇದು ಮಾನವ ಜೀವನದ ಗುಣಮಟ್ಟದಲ್ಲಿ ಕಂಡ ಸುಧಾರಣೆಯನ್ನು ಒಳಗೊಳ್ಳಬೇಕು. ಸರ್ಕಾರೇತರ

ಸಂಸ್ಥೆಗಳು ಉದ್ದೇಶಿತ ಗ್ರಾಮೀಣ ಪ್ರದೇಶಗಳ ಆರ್ಥಿಕ ಜೀವನ ಸ್ಥಿತಿಗತಿಯನ್ನು ಸುಧಾರಿಸುವಲ್ಲಿ ಇತರರಗಿಂತ ಮೇಲುಗೈ ಸಾಧಿಸಿವೆ.

ಸರ್ಕಾರೇತರ ಸಂಸ್ಥೆಗಳು ಉದ್ದೇಶಕ್ಕೆ ಬದಲಾಗಿ ಫಲತಾಂಶದ ಕಡೆಗೆ ಹೆಚ್ಚುಗಮನ ಹರಿಸುತ್ತವೆ. ವಿಶಾಲ ದೃಷ್ಟಿಕೋನದಿಂದ ನೋಡಿದರೆ, ಸರ್ಕಾರೇತರ ಸಂಸ್ಥೆಗಳು ಗ್ರಾಮೀಣ ಅರ್ಥವ್ಯವಸ್ಥೆಯ ಹೊರಮೈಯಿಂದ, ಗ್ರಾಮೀಣ ಪ್ರದೇಶಗಳ ಅಭಿವೃದ್ಧಿಯಲ್ಲಿ ಸಕ್ರಿಯ ಪಾಲುದಾರರಾಗಿ ತಮ್ಮ ಕಾರ್ಯವ್ಯಾಪ್ತಿಯನ್ನು ವಿಸ್ತರಿಸಬಹುದು. ಈ ದಿಶೆಯಲ್ಲಿ ಅವುಗಳ ಕೆಲಸ ಪಾರದರ್ಶಕವಾಗಿದ್ದರೆ ಮಾತ್ರ ಅವುಗಳ ವಿಶ್ವಾಸಾರ್ಹತೆ ಹೆಚ್ಚುತ್ತದೆ.

ಸರ್ಕಾರೇತರ ಸಂಸ್ಥೆಗಳ ಬದಲಾದ ಪಾತ್ರವನ್ನು ನಾವು ಗಮನಿಸಬಹುದು. ಹಿಂದೆ ಸರ್ಕಾರೇತರ ಸಂಸ್ಥೆಗಳು ಭೂಕಂಪ ಮತ್ತು ಬರಗಾಲದಂತಹ ನೈಸರ್ಗಿಕ ವಿಕೋಪಗಳ ಸಂದರ್ಭದಲ್ಲಿ, ಸಾಂಕ್ರಾಮಿಕ ರೋಗಗಳು ಹಬ್ಬಿದಾಗ, ಪರಿಹಾರ ಕ್ರಮಗಳನ್ನು ಕೈಗೊಳ್ಳುತ್ತಿದ್ದವು. ಕಾಲಾನಂತರದಲ್ಲಿ ಅವುಗಳು ಕಲ್ಯಾಣ ಮತ್ತು ಅಭಿವೃದ್ಧಿ ಕಾರ್ಯಕ್ರಮಗಳನ್ನು ಹಮ್ಮಿಕೊಳ್ಳಲಾರಂಬಿಸಿದವು.

ಸರ್ಕಾರೇತರ ಸಂಸ್ಥೆಗಳು ಜನ ಕೇಂದ್ರಿತ ವಿಧಾನಕ್ಕೆ ಬದ್ಧವಾಗಿರುವ ಜನರ ಸಂಘಟಿತ ಹಿತಾಸಕ್ತಿ ಗುಂಪುಗಳು ಸೃಷ್ಟಿಸುವ ಸಾಮಾಜಿಕ ಪ್ರಜ್ಞೆಯಿಂದ ಸರ್ಕಾರೇತರ ಸಂಸ್ಥೆಗಳ ಚಟವಟಿಕೆ ಆರಂಭವಾಗಿದೆ. ಇದರಿಂದ ಸ್ಥಳೀಯ ಮುತುವರ್ಜಿ ಮತ್ತು ನಾಯಕತ್ವಕ್ಕೆ ಉತ್ತೇಜನ ಸಿಕ್ಕಿದೆ. ಸರ್ಕಾರೇತರ ಸಂಸ್ಥೆಗಳು ಗ್ರಾಮೀಣಾಭಿವೃದ್ಧಿಗೆ ಹೊಸ ಉತ್ತೇಜನವನ್ನು ನೀಡಿವೆ. ಗ್ರಾಮೀಣ ತಳಮಟ್ಟದ ಬಡಜನರ ಉದ್ಧಾರಕ್ಕಾಗಿ ಸರ್ಕಾರೇತರ ಸಂಸ್ಥೆಗಳು ವಿವಿಧ ಹೊಸ ಪ್ರಯೋಗಗಳನ್ನು ನಡೆಸಿವೆ ಮತ್ತು ತಳಮಟ್ಟದಲ್ಲಿ ಹೊಸ ನಾಯಕತ್ವವನ್ನು ಒದಗಿಸಿವೆ.

ಪ್ರಸ್ತುತ ಸರ್ಕಾರೇತರ ಸಂಸ್ಥೆಗಳು ಹಲವಾರು ಕ್ಷೇತ್ರಗಳಲ್ಲಿ ಸಕ್ರಿಯವಾಗಿದೆ. ಕೆಲವು ಸರ್ಕಾರೇತರ ಸಂಸ್ಥೆಗಳು ಅಭಿವೃದ್ಧಿ ಕಾರ್ಯಗಳನ್ನು ಕೈಗೆತ್ತಿಕೊಳ್ಳುವುದಿಲ್ಲ ಬದಲಾಗಿ ಭ್ರಷ್ಟಾಚಾರ ಮತ್ತು ಅದಕ್ಷತೆಗೆ ಕಡಿವಾಣ ಹಾಕಲು ಪ್ರಯತ್ನಿಸುತ್ತವೆ. ಅದಲ್ಲದೆ ಲಭ್ಯವಿರುವ ತಂತ್ರಜ್ಞಾನ ಸಣ್ಣ ರೈತರ ಮತ್ತು ಕುಶಲಕರ್ಮಿಗಳ ನೆರವಿಗೆ ಬರಬೇಕೆಂಬ ಉದ್ದೇಶದಿಂದ, ಗ್ರಾಮೀಣ ಪ್ರದೇಶದಲ್ಲಿ ಹೊಸ ವೃತ್ತಿಪರ ಕ್ಷೇತ್ರವನ್ನು ತರಲು ಸರ್ಕಾರೇತರ ಸಂಸ್ಥೆಗಳು ಗ್ರಾಮೀಣ ತಂತ್ರಜ್ಞಾನದ ಕಡೆಗೆ ತಮ್ಮ ಗಮನ ಕೇಂದ್ರೀಕರಿಸಿವೆ. ಇದರಿಂದ ಗ್ರಾಮೀಣ ಪ್ರದೇಶದಲ್ಲಿ ಹೊಸ ವೃತ್ತಿಪರ ಕ್ಷೇತ್ರವನ್ನು ತರಲು ಸರ್ಕಾರೇತರ ಸಂಸ್ಥೆಗಳು ಪ್ರಯತ್ನಿಸುತ್ತಿವೆ. ಸರ್ಕಾರೇತರ ಸಂಸ್ಥೆಗಳು ಗ್ರಾಮೀಣ ಜೀವನದ ಎಲ್ಲಾ ಅಂಶಗಳನ್ನು

ಒಳಗೊಳ್ಳುವ ರೀತಿಯಲ್ಲಿ ತಮ್ಮ ಚಟುವಟಿಕೆಗಳನ್ನು ರೂಪಿಸಿ ಕಡಿಮೆ ವೆಚ್ಚದ ವಿತರಣಾ ವ್ಯವಸ್ಥೆಯನ್ನು ರೂಪಿಸಲು ಶಕ್ತವಾಗಿದೆ.

## ಸರಕಾರೇತರ ಸಂಸ್ಥೆಗಳ ಉದ್ದೇಶಗಳು ಮತ್ತು ಕಾರ್ಯಗಳು:

ಸರ್ಕಾರೇತರ ಸಂಸ್ಥೆಗಳು ನಗರ ಮತ್ತು ಗ್ರಾಮೀಣಾಭಿವೃದ್ಧಿಯಲ್ಲಿ ಮಹತ್ವ ಕಾರ್ಯವನ್ನು ನಿರ್ವಹಿಸುತ್ತದೆ. ಅನಾದಿ ಕಾಲದಿಂದಲೂ ನಮ್ಮ ದೇಶದಲ್ಲಿ ಜನತೆಯ ಕಲ್ಯಾಣವನ್ನು ಹೆಚ್ಚಿಸುವುದರಲ್ಲಿ ಸರ್ಕಾರೇತರ ಸಂಸ್ಥೆಗಳು ಮಹತ್ವದ ಪಾತ್ರವಹಿಸಿದೆ. ಜಿಲ್ಲಾ ಮಟ್ಟದ ಯೋಜನಾ ಕಾರ್ಯ ತಂಡವು ಆಯಾ ಕ್ಷೇತ್ರಗಳ ಸರ್ಕಾರೇತರ ಸಂಸ್ಥೆಗಳ ನೆರವನ್ನು ಪಡೆಯಬೇಕು ಒಂದು ಸಮಾಜವನ್ನು ಆರ್ಥಿಕವಾಗಿ ಮತ್ತು ಸಾಮಾಜಿಕವಾಗಿ ಅಭಿವೃದ್ಧಿಗೊಳಸಲು ಸರ್ಕಾರೇತರ ಸಂಸ್ಥೆಗಳು ಉತ್ತಮವಾದ ನೆರವನ್ನು ನೀಡುತ್ತವೆ.

## ಸರ್ಕಾರೇತರ ಸಂಸ್ಥೆಗಳ ಮುಖ್ಯ ಉದ್ದೇಶಗಳು ಈ ಕೆಳಕಂಡಂತಿವೆ.

### ೧. ಗ್ರಾಮೀಣ ಅಭಿವೃದ್ಧಿಯನ್ನು ಸಾಧಿಸುವುದು :

ಸರ್ಕಾರೇತರ ಸಂಸ್ಥೆಗಳ ಮುಖ್ಯ ಉದ್ದೇಶವೆಂದರೆ ಗ್ರಾಮೀಣ ಪ್ರದೇಶಗಳ ಅಭಿವೃದ್ಧಿಯನ್ನು ಸಾಧಿಸುವುದು. ಅನಾದಿ ಕಾಲದಿಂದಲೂ ಗ್ರಾಮೀಣ ಪ್ರದೇಶದ ಜನರು ಅನೇಕ ರೀತಿಯ ಸಮಸ್ಯೆಗಳಿಂದ ಬಳಲುತ್ತಿದ್ದಾರೆ. ಇಂತಹ ತೊಂದರೆಗಳನ್ನು ಹೋಗಲಾಡಿಸಿ, ಅವರಿಗೆ ಸರಿಯಾದ ರೀತಿಯ ಸ್ವಾತಂತ್ರ್ಯವನ್ನು ಒದಗಿಸಿ ಬಡವರ ಉದ್ದಾರವನ್ನು ಮಾಡುವುದು. ಸರ್ಕಾರೇತರ ಸಂಸ್ಥೆಗಳ ಉದ್ದೇಶಗಳಾಗಿವೆ. ಅದಲ್ಲದೆ ಸರ್ಕಾರೇತರ ಸಂಸ್ಥೆಗಳು ಸಮುದಾಯ ಉದ್ಧಾರದ ಗುರಿಯನ್ನು ಹೊಂದಿದೆ. ನಮ್ಮ ದೇಶದ ವಿವಿಧ ಗ್ರಾಮಗಳಲ್ಲಿ ಅನೇಕ ರೀತಿಯ ಸಮೂದಾಯಗಳಿವೆ. ಆಯಾ ಸಮೂದಾಯಗಳಲ್ಲಿ ಆ ಸಮೂದಾಯಕ್ಕೆ ಸೇರಿದ ಜನರು ವಾಸಿಸುತ್ತಾರೆ. ಒಂದು ಸಮೂದಾಯದಿಂದ ಮತ್ತೊಂದು ಸಮೂದಾಯಕ್ಕೆ ಭಿನ್ನತೆಯಿರುತ್ತದೆ. ಈ ನಿಟ್ಟಿನಲ್ಲಿ ಸರ್ಕಾರೇತರ ಸಂಸ್ಥೆಗಳು ಎಲ್ಲಾ ಸಮೂದಾಯಗಳಿಗೆ ಸಮಾಂಜಸವಾಗುವಂತೆ ವಿವಿಧ ರೀತಿಯ ಕಾರ್ಯ ಯೋಜನೆಗಳನ್ನು ರೂಪಿಸಿ ಗ್ರಾಮೀಣಾಭಿವೃದ್ಧಿಯನ್ನು ಸಾಧಿಸುತ್ತಿದೆ.

### ೨. ಮೂಲ ಸೌಕರ್ಯ ಅಭಿವೃದ್ಧಿ :

ಗ್ರಾಮೀಣ ಪ್ರದೇಶದ ಜನರು ಅನೇಕ ರೀತಿಯ ಮೂಲ ಸೌಕರ್ಯ ಮತ್ತು ಸವಲತ್ತುಗಳಿಂದ ವಂಚಿತರಾಗಿದ್ದಾರೆ. ಜನರಿಗೆ ಮುಖ್ಯವಾಗಿ ಅಗತ್ಯವೆನಿಸಿರುವ ಕುಡಿಯುವ ನೀರು, ಶೌಚಾಲಯಗಳು, ವಸತಿ, ರಸ್ತೆಗಳು, ಮಾರುಕಟ್ಟೆಗಳು, ಆರೋಗ್ಯ ಸೇವೆಗಳು, ವಿದ್ಯುತ್ ಪೂರೈಕೆ ಎಲ್ಲವೂ ಅಗತ್ಯಗಳಿಗನುಗುಣವಾಗಿಲ್ಲ. ಈ ಎಲ್ಲಾ ಮೂಲಭೂತ ಸೌಕರ್ಯಗಳನ್ನು ಪೂರೈಸುವಲ್ಲಿ ಸರ್ಕಾರೇತರ

ಸಂಸ್ಥೆಗಳು ಯಶಸ್ವಿಯಾಗಿವೆ. ಜನರಿಗೆ ಮೂಲಭೂತ ಸೌಕರ್ಯಗಳ ಅರಿವನ್ನು ಮೂಡಿಸಿ ಅವರಿಗೆ ಅಗತ್ಯವಿರುವ ಮೂಲ ಸವಲತ್ತುಗಳನ್ನು ಒದಗಿಸುವುದರಲ್ಲಿ ಸರ್ಕಾರೇತರ ಸಂಸ್ಥೆಗಳು ಪ್ರಮುಖ ಪಾತ್ರ ವಹಿಸುತ್ತವೆ.

**೩. ಬಡತನವನ್ನು ನಿವಾರಿಸುವುದು :**

ನಮ್ಮ ದೇಶ ಮತ್ತು ರಾಜ್ಯದಲ್ಲಿ ಬಡತನ ಒಂದು ಗಂಭೀರ ಸಮಸ್ಯೆಯಾಗಿದೆ. ಅದು ಕೇವಲ ಆರ್ಥಿಕ ವಿಚಾರವಾಗಿದೆ ಮಾನವ ಪರಿಸ್ಥಿತಿಯಾಗಿದೆ. ನಮ್ಮ ದೇಶದ ಅನೇಕ ಗ್ರಾಮೀಣ ಪ್ರದೇಶಗಳು ಇನ್ನೂ ಸರಕಾರದ ಸವಲತ್ತುಗಳಿಂದ ವಂಚಿತವಾಗಿವೆ. ಗ್ರಾಮೀಣ ಪ್ರದೇಶಗಳಲ್ಲಿ ವಾಸಿಸುವ ಜನರು ಸರಕಾರವು ನಿಗದಿಪಡಿಸಿರುವ ಬಡತನ ರೇಖೆಗಿಂತ ತಳಮಟ್ಟದಲ್ಲಿ ತಮ್ಮ ಜೀವನವನ್ನು ನಡೆಸುತ್ತಿದ್ದಾರೆ. ಗ್ರಾಮೀಣ ಪ್ರದೇಶದ ಜನರಿಗೆ ಸರಿಯಾದ ಆರ್ಥಿಕ, ಸಾಮಾಜಿಕ ಸಹಾಯಗಳು ದೊರಕದೆ ಜನರು ಸಂಕಷ್ಟದ ಜೀವನವನ್ನು ನಡೆಸುತ್ತಿದ್ದಾರೆ.

ಈ ರೀತಿಯ ಬಡತನದ ಸಮಸ್ಯೆಗಳನ್ನು ಹೋಗಲಾಡಿಸಲು ಸರ್ಕಾರೇತರ ಸಂಸ್ಥೆಗಳು ಶ್ರಮಿಸುತ್ತಿವೆ. ಸರಕಾರವು ಜಾರಿಗೆ ತಂದಂತಹ ಯೋಜನೆಗಳನ್ನು ಗ್ರಾಮೀಣ ಪ್ರದೇಶಗಳಲ್ಲಿ ಅನುಷ್ಠಾನಕ್ಕೆ ತರುವಲ್ಲಿ ಸರ್ಕಾರೇತರ ಸಂಸ್ಥೆಗಳು ಪ್ರಮುಖ ಕಾರ್ಯ ನಿರ್ವಹಿಸುತ್ತವೆ. ಬಡವರ ಉದ್ಧಾರಕ್ಕಾಗಿ ಉತ್ತಮ ಯೋಜನೆಗಳನ್ನು ರೂಪಿಸಿ ಬಡವರ ಉದ್ಧಾರವನ್ನು ಸಾಧಿಸುವುದು ಸರ್ಕಾರೇತರ ಸಂಸ್ಥೆಗಳ ಉದ್ದೇಶವಾಗಿದೆ.

**೪. ಗ್ರಾಮೀಣ ಪ್ರದೇಶದಲ್ಲಿ ಹೊಸ ತಂತ್ರಜ್ಞಾನಗಳ ಬಳಕೆಗೆ ಪ್ರೋತ್ಸಾಹ:**

ಗ್ರಾಮೀಣ ಪ್ರದೇಶದ ಜನರು ಪುರಾತನ ಕಾಲದಿಂದಲೂ ಹಳೆಯ ತಂತ್ರಜ್ಞಾನಗಳನ್ನು ಬಳಸುತ್ತಿದ್ದಾರೆ. ಕೃಷಿಯಲ್ಲಿ ಪುರಾತನ ತಂತ್ರಜ್ಞಾನವನ್ನು ಬಳಸುವುದರಿಂದ ಕೃಷಿಯ ಇಳುವರಿಯು ಕಡಿಮೆ ಪ್ರಮಾಣದಲ್ಲಿ ದೊರೆಯುತ್ತಿವೆ. ಇದರಿಂದ ಗ್ರಾಮೀಣ ಪ್ರದೇಶದ ರೈತರಿಗೆ ಮತ್ತು ಇನ್ನಿತರ ಕುಶಲ ಕರ್ಮಿಗಳಿಗೆ ಲಾಭಾಂಶವು ಸರಿಯಾದ ಪ್ರಮಾಣದಲ್ಲಿ ದೊರೆಯುತ್ತಿಲ್ಲ.

ಈ ನಿಟ್ಟಿನಲ್ಲಿ ಸರ್ಕಾರೇತರ ಸಂಸ್ಥೆಗಳು ಗ್ರಾಮೀಣ ಪ್ರದೇಶದಲ್ಲಿ ಹೊಸ ತಂತ್ರಜ್ಞಾನಗಳ ಮತ್ತು ವೈಜ್ಞಾನಿಕತೆಯನ್ನು ಬಳಸಲು ಪ್ರೋತ್ಸಾಹವನ್ನು ನೀಡುತ್ತಿವೆ. ಗ್ರಾಮೀಣ ಜನರಿಗೆ ಹೊಸ ತಂತ್ರಜ್ಞಾನದ ಅಳವಡಿಕೆಯ ಬಗ್ಗೆ ಉತ್ತಮ ಮಾಹಿತಿ ಮತ್ತು ತರಬೇತಿಯನ್ನು ಸರ್ಕಾರೇತರ ಸಂಸ್ಥೆಗಳು ನೀಡುತ್ತವೆ. ಇದರಿಂದ ಕೃಷಿಯಲ್ಲಿ ಪ್ರಗತಿಯಾಗುವುದಲ್ಲದೆ ಜನರು ಸರಿಯಾದ ಲಾಭವನ್ನು ಪಡೆಯಲು ಸಾಧ್ಯವಾಗುತ್ತದೆ.

**೫. ಸ್ವ-ಉದ್ಯೋಗಗಳ ಸೃಷ್ಠಿ :**

ನಮ್ಮ ದೇಶದಲ್ಲಿ ನೆಲೆಗೊಂಡಿರುವಂತಹ ಬಡತನದಂತಹ ಸಮಸ್ಯೆಗಳಿಗೆ ಕಾರಣವೇನೆಂದರೆ ಜನರಿಗೆ ಸರಿಯಾದ ರೀತಿಯಲ್ಲಿ ಉದ್ಯೋಗವಕಾಶಗಳು ದೊರೆಯುತ್ತಿಲ್ಲ. ಉನ್ನತ ಪಧವೀಧರರು ಸರಿಯಾದ ಕೆಲಸವಿಲ್ಲದ ಅಲೆದಾಡುವ ಪರಿಸ್ಥಿತಿ ಉಂಟಾಗಿದೆ. ಕೆಲಸವಿಲ್ಲದೆ ಜನರಿಗೆ ಸರಿಯಾದ ರೀತಿಯಲ್ಲಿ ಜೀವನವನ್ನು ನಡೆಸಲು ಸಾಧ್ಯವಾಗುತ್ತಿಲ್ಲ. ಗ್ರಾಮೀಣ ಪ್ರದೇಶದ ಬಹುತೇಕ ಜನರು ಅನಕ್ಷರಸ್ಥರಾಗಿದ್ದಾರೆ. ಅದಲ್ಲದೆ ತಮ್ಮ ಜೀವನವನ್ನು ನಡೆಸಲು ಕೃಷಿಯನ್ನೇ ತಮ್ಮ ಮೂಲಕಸುಬನ್ನಾಗಿ ಆಯ್ಕೆ ಮಾಡಿಕೊಂಡಿದ್ದಾರೆ. ಬಂಡವಾಳದ ಕೊರತೆ ಮತ್ತು ತಂತ್ರಜ್ಞಾನದ ಕೊರತೆಯಿಂದ ಜನರು ತಮ್ಮಲ್ಲಿರುವ ಪ್ರತಿಭೆಯನ್ನು ಪ್ರದರ್ಶಿಸಲು ಸಾಧ್ಯವಾಗುತ್ತಿಲ್ಲ. ಹೆಚ್ಚು ವಿದ್ಯಾಭ್ಯಾಸ ಮಾಡಿದ ಜನರು ಕಡಿಮೆ ವೇತನಗಳಿಗೆ ದುಡಿಯುತ್ತಿದ್ದಾರೆ. ಇದರಿಂದ ಅವರ ಜೀವನ ಮಟ್ಟ ಬಡತನ ರೇಖೆಗಿಂತ ತಳ ಮಟ್ಟದಲ್ಲಿದೆ. ಸರ್ಕಾರೇತರ ಸಂಸ್ಥೆಗಳು ಸ್ವ-ಉದ್ಯೋಗವನ್ನು ಸೃಷ್ಠಿಸುವಲ್ಲಿ ಪ್ರಮುಖ ಪಾತ್ರವಹಿಸುತ್ತವೆ. ಸರ್ಕಾರೇತರ ಸಂಸ್ಥೆಗಳು ಅನೇಕ ಮಾಹಿತಿ ಮತ್ತು ತರಬೇತಿ ಸಂಸ್ಥೆಗಳನ್ನು ಸ್ಥಾಪಿಸಿ ಗ್ರಾಮೀಣ ಪ್ರದೇಶದ ಜನರಿಗೆ ಅತೀ ಕಡಿಮೆ ಬಂಡವಾಳವನ್ನು ಉಪಯೋಗಿಸಿ ಸ್ವಂತ ಉದ್ಯೋಗಗಳನ್ನು ಪ್ರಾರಂಭಿಸಲು ತರಬೇತಿಯನ್ನು ನೀಡುತ್ತವೆ. ಇದರಿಂದ ಗ್ರಾಮೀಣ ಪ್ರದೇಶದ ನಿರುದ್ಯೋಗ ಸಮಸ್ಯೆಯನ್ನು ಹೋಗಲಾಡಿಸಿ ಉತ್ತಮ ಲಾಭವನ್ನು ಗಳಿಸಲು ಸಹಾಯವಾಗುತ್ತದೆ.

**೬. ಸಣ್ಣ ಕೈಗಾರಿಕೆಗಳನ್ನು ಉತ್ತೇಜಿಸುವುದು:**

ಸರ್ಕಾರೇತರ ಸಂಸ್ಥೆಗಳು ಜನರ ಸಹಾಯಕ್ಕಾಗಿ ಸ್ವಯಂ ಪ್ರೇರಿತವಾಗಿ ಮೂಡಿ ಬಂದಂತಹ ಸಂಸ್ಥೆಗಳಾಗಿವೆ. ಈ ಸಂಸ್ಥೆಗಳು ಬಡವರ ಉದ್ಧಾರಕ್ಕಾಗಿ ಅನೇಕ ಯೋಜನೆಗಳನ್ನು ರೂಪಿಸಿ ಅವುಗಳನ್ನು ಗ್ರಾಮೀಣ ಪ್ರದೇಶಗಳಲ್ಲಿ ಅನುಷ್ಠಾನಕ್ಕೆ ತರಲು ಶ್ರಮಿಸುತ್ತಿವೆ. ಈ ಸಂಸ್ಥೆಗಳು ಸ್ವ ಉದ್ಯೋಗಕ್ಕೆ ಹೆಚ್ಚಿನ ಮಹತ್ವವನ್ನು ನೀಡುತ್ತವೆ. ಈ ಸಂಸ್ಥೆಗಳ ಮುಖ್ಯ ಧ್ಯೇಯವೇನೆಂದರೆ ಜನರು ಸ್ವಾವಲಂಬಿಗಳಾಗಬೇಕು. ಗ್ರಾಮೀಣ ಪ್ರದೇಶದ ಜನರು ತಮ್ಮ ಉದ್ಯೋಗಗಳಿಗಾಗಿ ಬೇರೆ ಬೇರೆ ಪ್ರದೇಶಗಳಲ್ಲಿ ಅಲೆದಾಡುವುದಕ್ಕಿಂತ ತಮ್ಮದೇ ಆದ ಸ್ವಉದ್ಯೋಗಗಳನ್ನು ಪ್ರಾರಂಭಿಸುವುದರಿಂದ ಅವರ ಜೀವನ ಮಟ್ಟವನ್ನು ಉತ್ತಮವಾಗಿಸಬಹುದು. ಆದುದರಿಂದ ಸರ್ಕಾರೇತರ ಸಂಸ್ಥೆಗಳು ಸ್ವ-ಉದ್ಯೋಗ ಮತ್ತು ಸಣ್ಣ ಕೈಗಾರಿಕೆಗಳ ಅಭಿವೃದ್ಧಿಗೆ ಉತ್ತೇಜನವನ್ನು ನೀಡುತ್ತವೆ.

**೭. ಭ್ರಷ್ಟಾಚಾರವನ್ನು ತಡೆಗಟ್ಟುವುದು:**

ಭ್ರಷ್ಟಾಚಾರವು ನಮ್ಮ ದೇಶಕ್ಕೆ ಅಂಟಿಕೊಂಡ ಬಾಲಗ್ರಹ ಪೀಡೆಯಾಗಿದೆ. ಅನೇಕ ಶತಮಾನಗಳಿಂದ ನಮ್ಮ ದೇಶದ ಜನರು ಸಾಮಾಜಿಕವಾಗಿ, ರಾಜಕೀಯವಾಗಿ ಮತ್ತು

ಸಾಂಸ್ಕೃತಿಕವಾಗಿ ಅನೇಕ ಭ್ರಷ್ಟಾಚಾರಗಳನ್ನು ಅನುಭವಿಸುತ್ತಿದ್ದಾರೆ. ಅದರಲ್ಲೂ ಗ್ರಾಮೀಣ ಪ್ರದೇಶಗಳಲ್ಲಿ ಇದರ ಪ್ರಮಾಣವು ಹೆಚ್ಚಾದ ರೀತಿಯಲ್ಲಿ ಕಾಣಸಿಗುತ್ತವೆ. ಏಕೆಂದರೆ ಗ್ರಾಮೀಣ ಪ್ರದೇಶದ ಜನರು ಪುರಾತನ ರೀತಿ ನೀತಿ ಮತ್ತು ಮೂಢನಂಬಿಕೆಗಳನ್ನು ಅನುಸರಿಸಿಕೊಂಡು ಬರುತ್ತಿದ್ದಾರೆ. ಸರಕಾರದಿಂದ ಬಂದಂತಹ ಸವಲತ್ತುಗಳು ಅವರಿಗೆ ಸರಿಯಾದ ರೀತಿಯಲ್ಲಿ ದೊರಕುತ್ತಿಲ್ಲ. ಎಲ್ಲೆಲ್ಲೂ ಲಂಚ, ಭ್ರಷ್ಟಾಚಾರಗಳು ಹೆಚ್ಚಾಗಿ ಜನರು ನಾನಾ ರೀತಿಯ ತೊಂದರೆಗಳನ್ನು ಅನುಭವಿಸುತ್ತಿದ್ದಾರೆ. ಇಂತಹ ಸಮಸ್ಯೆಗಳಂದ ಗ್ರಾಮೀಣ ಪ್ರದೇಶದ ಜನರನ್ನು ರಕ್ಷಿಸಲು, ಸರ್ಕಾರೇತರ ಸಂಸ್ಥೆಗಳು ವಿವಿಧ ಯೋಜನೆ ಮತ್ತು ಪ್ರಯತ್ನಗಳನ್ನು ಮಾಡುತ್ತಿವೆ.

**೮. ಮಹಿಳೆ ಮತ್ತು ಮಕ್ಕಳ ಅಭಿವೃದ್ಧಿ:**

ಗ್ರಾಮೀಣ ಪ್ರದೇಶಗಳಲ್ಲಿ ಮಹಿಳೆಯರ ಸ್ಥಾನಮಾನಗಳು ಇನ್ನೂ ಕೆಳಮಟ್ಟದಲ್ಲಿದೆ. ಮಹಿಳೆಯರ ಸ್ಥಿತಿಗತಿಗಳು ಹಿನಾಯ ಸ್ಥಿತಿಯನ್ನು ತಲುಪುತ್ತಿವೆ. ಮಹಿಳೆಯರು ಸಾಮಾಜಿಕವಾಗಿ, ರಾಜಕೀಯವಾಗಿ ಮತ್ತು ಆರ್ಥಿಕವಾಗಿ ಹಿಂದುಳದಿದ್ದಾರೆ. ಮಹಿಳೆಯರಿಗೆ ಪುರುಷರಷ್ಟೇ ಸರಿಸಮಾನ ಸ್ಥಾನಮಾನಗಳು ದೊರಕುತ್ತಿಲ್ಲ. ಮಹಿಳೆಯರು ತಮ್ಮ ಸ್ವಾತಂತ್ರ್ಯವನ್ನು ಕಳೆದುಕೊಂಡಿದ್ದಾರೆ. ಮಹಿಳೆಯರು ಎಲ್ಲಾ ರೀತಿಯ ಸವಲತ್ತುಗಳಂದ ವಂಚಿತರಾಗಿದ್ದಾರೆ. ಮಹಿಳೆಯರು ಇನ್ನೂ ಗುಲಾಮಗಿರಿಯಿಂದ ಮುಕ್ತಿಯನ್ನು ಪಡೆದಿಲ್ಲ ಆದುದರಿಂದ ಮಹಿಳೆಯರ ಸ್ಥಿತಿಗತಿಯನ್ನು ಸುಧಾರಿಸಲು ಮಹಿಳಾ ಸಬಲೀಕರಣದ ಅಗತ್ಯವಿದೆ. ಅಂದರೆ ಮಹಿಳೆಯರನ್ನು ಸಾಮಾಜಿಕವಾಗಿ, ರಾಜಕೀಯವಾಗಿ ಮತ್ತು ಆರ್ಥಿಕವಾಗಿ, ಸಶಕ್ತರನ್ನಾಗಿ ಮಾಡುವುದು ಮತ್ತು ಮಹಿಳೆಯರ ಮೇಲೆ ನಡೆಯುವ ಶೋಷಣೆಯನ್ನು ತಡೆಗಟ್ಟಿ ಅವರು ಮುಕ್ತ ವಾತಾವರಣದಲ್ಲಿ ತಮ್ಮ ಹಕ್ಕುಗಳನ್ನು ಅನುಭವಿಸುವಂತೆ ಮಾಡಲು ಸರ್ಕಾರೇತರ ಸಂಸ್ಥೆಗಳು ಶ್ರಮಿಸುತ್ತಿವೆ.

ಮಕ್ಕಳ ಹಕ್ಕುಗಳ ಹಿತರಕ್ಷಣೆಗಾಗಿ ಸರ್ಕಾರೇತರ ಸಂಸ್ಥೆಗಳು ಶ್ರಮಿಸುತ್ತಿವೆ. ಮಕ್ಕಳ ಮೇಲೆ ನಡೆಯುವಂತಹ ಶೋಷಣೆ, ಬಾಲಕಾರ್ಮಿಕರು ಮತ್ತು ಮಕ್ಕಳನ್ನು ಗುಲಾಮಗಿರಿಯಿಂದ ಮುಕ್ತಗೊಳಸಲು ಅನೇಕ ಯೋಜನೆಗಳು ಮತ್ತು ಬಾಲ ವಿಕಾಸ ಕೇಂದ್ರಗಳನ್ನು ಪ್ರಾರಂಭಿಸಿ ಮಕ್ಕಳ ಹಕ್ಕುಗಳ ಹಿತರಕ್ಷಣೆಯನ್ನು ಕಾಪಾಡುತ್ತಿವೆ.

**೯. ಪ್ರಾಥಮಿಕ ಶಿಕ್ಷಣಕ್ಕೆ ಉತ್ತೇಜನ :**

ಜನರು ಶಿಕ್ಷಿತರಾದರೆ ಮಾತ್ರ ಅವರಿಗೆ ಅವರ ಮೇಲೆ ನಡೆಯುವ ಭ್ರಷ್ಟಾಚಾರಗಳ ಅರಿವಾಗುತ್ತದೆ. ಗ್ರಾಮೀಣ ಪ್ರದೇಶದಲ್ಲಿ ನಡೆಯುವಂತಹ ಅವ್ಯವಹಾರಗಳನ್ನು ತಡೆಗಟ್ಟಲು ಶಿಕ್ಷಣ ಒಂದು ಆಯುಧದಂತೆ ವರ್ತಿಸುತ್ತದೆ. ಸರ್ಕಾರೇತರ ಸಂಸ್ಥೆಗಳು ಪ್ರಾಥಮಿಕ ಶಿಕ್ಷಣಕ್ಕೆ ಹೆಚ್ಚಿನ

ಉತ್ತೇಜನವನ್ನು ನೀಡುತ್ತವೆ. ಅದಲ್ಲದೆ ಜನರಿಗೆ ಸ್ವ-ಉದ್ಯೋಗವನ್ನು ದೊರಕಿಸಲು ಉತ್ತಮ ರೀತಿಯ ಪ್ರಚೋದನಕಾರಿ ಶಿಕ್ಷಣ ಮತ್ತು ತರಬೇತಿಗಳನ್ನು ನೀಡುತ್ತಿವೆ. ನಮ್ಮ ಸರಕಾರವು ಪ್ರಾಥಮಿಕ ಶಿಕ್ಷಣವನ್ನು ಉಚಿತ ಮತ್ತು ಕಡ್ಡಾಯವನ್ನಾಗಿ ಮಾಡಿದೆ.

ಸರಕಾರವು ಜಾರಿಗೆ ತಂದ ಈ ಕಡ್ಡಾಯ ಶಿಕ್ಷಣ ಕಾಯಿದೆಯನ್ನು ಅನುಷ್ಠಾನಕ್ಕೆ ತರಲು ಮತ್ತು ಗ್ರಾಮೀಣ ಪ್ರದೇಶಗಳಲ್ಲಿ ಪ್ರಾಥಮಿಕ ಶಿಕ್ಷಣವನ್ನು ಕಡ್ಡಾಯಗೊಳಿಸಲು ಸರ್ಕಾರೇತರ ಸಂಸ್ಥೆಗಳು ಮಹತ್ವದ ಪಾತ್ರ ವಹಿಸುತ್ತವೆ.

### ೧೦. ಆರ್ಥಿಕ ಅಥವಾ ಹಣಕಾಸಿನ ಸಹಾಯವನ್ನು ಒದಗಿಸುವುದು :

ಗ್ರಾಮೀಣ ಪ್ರದೇಶದ ಜನರು ಸ್ವಾವಲಂಬಿಗಳಾಗಬೇಕು ಅವರು ತಮ್ಮ ಬೇಡಿಕೆಗಳ ಪೂರೈಕೆಗೆ ಬೇರೆಯವರನ್ನು ಅವಲಂಬಿತರಾಗಬಾರದು. ಗ್ರಾಮೀಣ ಪ್ರದೇಶದ ಜನರು ಆರ್ಥಿಕ ಸಮಸ್ಯೆಗಳಿಂದ ಬಳಲುತ್ತಿದ್ದಾರೆ ಅವರಿಗೆ ಸರಿಯಾದ ರೀತಿಯ ಆರ್ಥಿಕ ಎಂದರೆ ಹಣಕಾಸಿನ ಸಹಾಯಗಳು ದೊರೆಯುತ್ತಿಲ್ಲ ಜನರು ಸಾಲ ಸೌಲಭ್ಯಗಳಿಗಾಗಿ ಲೇವಾದೇವಿಗಾರರನ್ನು ಅವಲಂಬಿಸಿದ್ದಾರೆ. ಈ ಲೇವಾದೇವಿದಾರರು ಜನರಿಗೆ ಕಡಿಮೆ ಸಾಲವನ್ನು ನೀಡಿ ಅತೀ ಹೆಚ್ಚಿನ ಬಡ್ಡಿಯನ್ನು ಕೇಳುತ್ತಾರೆ ಇದರಿಂದ ಜನರು ತಮ್ಮ ಆಸ್ತಿ ಪಾಸ್ತಿಗಳನ್ನು ಕಳೆದುಕೊಂಡು ಬೀದಿಗೆ ಬೀಳುವಂತಹ ಪರಿಸ್ಥಿತಿ ತಲೆದೋರುತ್ತದೆ. ಇಂತಹ ಸಮಸ್ಯೆಗಳಿಂದ ಜನರನ್ನು ಪಾರು ಮಾಡಲು ಸರ್ಕಾರೇತರ ಸಂಸ್ಥೆಗಳು ವಿವಿಧ ಸಂಸ್ಥೆಗಳ ಮೂಲಕ ಹಣಕಾಸಿನ ನೆರವನ್ನು ನೀಡಿ ಗ್ರಾಮೀಣ ಜನರ ಜೀವನ ಮಟ್ಟವನ್ನು ಉತ್ತಮಗೊಳಿಸುತ್ತಿದೆ.

### ೧೧. ಕೃಷಿ ಅಭಿವೃದ್ಧಿಗೆ ಸಹಕಾರ :

ಭಾರತ ಕೃಷಿ ಪ್ರಧಾನ ದೇಶ. ನಮ್ಮ ದೇಶದ ಪ್ರತೀ ಹಳ್ಳಿಗಳ ಮೂಲ ಕಸುಬು ಕೃಷಿ ಆಗಿದೆ ಶೇಕಡಾ ೭೫% ರಷ್ಟು ಮಂದಿ ಜನರು ಕೃಷಿಯ ಮೇಲೆ ಅವಲಂಬಿತರಾಗಿದ್ದಾರೆ. ಕೃಷಿಯು ಅಭಿವೃದ್ಧಿಯಾದರೆ ನಮ್ಮ ದೇಶ ಮತ್ತು ದೇಶದ ಜನರು ಅಭಿವೃದ್ಧಿಯನ್ನು ಹೊಂದುತ್ತಾರೆ. ನಮ್ಮ ಸರಕಾರವು ಕೃಷಿಯನ್ನು ಅಭಿವೃದ್ಧಿ ಪಡಿಸಲು ಪಂಚವಾರ್ಷಿಕ ಯೋಜನೆಗಳ ಮೂಲಕ ಅನೇಕ ಯೋಜನೆಗಳನ್ನು ಜಾರಿಗೆ ತಂದರೂ ಆ ಯೋಜನೆಗಳು ಮತ್ತು ಅವುಗಳ ಉಪಯುಕ್ತತೆಗಳು ಸರಿಯಾದ ರೀತಿಯಲ್ಲಿ ಗ್ರಾಮೀಣ ಜನರಿಗೆ ಲಭ್ಯವಾಗುತ್ತಿಲ್ಲ ಜನರು ಬಂಡವಾಳದ ಮತ್ತು ಉತ್ತಮ ತಂತ್ರಜ್ಞಾನದ ಕೊರತೆಯನ್ನು ಅನುಭವಿಸುತ್ತಿದ್ದಾರೆ.

ಕೃಷಿಯಲ್ಲಿ ಪುರಾತನ ತಂತ್ರಜ್ಞಾನವನ್ನು ಅಳವಡಿಸುವುದರಿಂದ ಬರುವ ಇಳುವರಿ ಮತ್ತು ಲಾಭಂಶವು ಕಡಿಮೆಯಾಗಿದೆ. ಈ ನಿಟ್ಟಿನಲ್ಲಿ ಕೃಷಿಯನ್ನು ಅಭಿವೃದ್ಧಿ ಪಡಿಸಲು ಮತ್ತು ಉತ್ತಮ ತಂತ್ರಜ್ಞಾನದ ಮಾಹಿತಿ ಮತ್ತು ತರಬೇತಿಯನ್ನು ನೀಡಲು ಸರ್ಕಾರೇತರ ಸಂಸ್ಥೆಗಳು ಪ್ರಮುಖ ಪಾತ್ರವಹಿಸುತ್ತವೆ.

ಸರ್ಕಾರೇತರ ಸಂಸ್ಥೆಗಳು ಅನೇಕ ಕೃಷಿ ಮೇಳಗಳನ್ನು ನಡೆಸಿ ಉತ್ತಮವಾದ ತಳಗಳು ಮತ್ತು ರಸಗೊಬ್ಬರಗಳು, ಬೀಜಗಳು ಮತ್ತು ಕೃಷಿ ಸಲಕರಣೆಗಳ ಬಗ್ಗೆ ಸಮಗ್ರ ಮಾಹಿತಿಯನ್ನು ನೀಡುತ್ತವೆ. ಅಲ್ಲದೆ ತರಬೇತಿಯನ್ನು ಕೂಡಾ ನೀಡುತ್ತವೆ. ಜನರಿಗೆ ಕೃಷಿಯನ್ನು ನಡೆಸಲು ಉತ್ತಮವಾದ ಕಡಿಮೆ ಬಡ್ಡಿ ದರದಲ್ಲಿ ಸಾಲ ಸೌಲಭ್ಯಗಳನ್ನು ಸರ್ಕಾರೇತರ ಸಂಸ್ಥೆಗಳು ಒದಗಿಸುತ್ತವೆ.

### ೨.೫ ಸರ್ಕಾರೇತರ ಸಂಸ್ಥೆಗಳು ಹಮ್ಮಿಕೊಂಡಿರುವ ಗ್ರಾಮೀಣಾಭಿವೃದ್ಧಿ ಯೋಜನೆಗಳು:

ಸ್ವತಂತ್ರ ಭಾರತದಲ್ಲಿ ಸರ್ಕಾರೇತರ ಸಂಸ್ಥೆಗಳು ಗ್ರಾಮೀಣ ಜನತೆಗೆ ವಿವಿಧ ತೆರನಾದ ಯೋಜನೆಗಳು ಮತ್ತು ಚಟುವಟಿಕೆಗಳ ಮೂಲಕ ಸೇವೆ ಸಲ್ಲಿಸುತ್ತಿವೆ ಕಾಲಾನುಕ್ರಮದಲ್ಲಿ ಅವುಗಳ ಪಾತ್ರವು ಸಂಪೂರ್ಣವಾಗಿ ಬದಲಾಗಿದೆ. ಸರ್ಕಾರೇತರ ಸಂಸ್ಥೆಗಳು ಅಭಿವೃದ್ಧಿ ಮತ್ತು ಬದಲಾವಣೆಯ ಮೇಲೆ ತಮ್ಮ ಗಮನ ಕೇಂದ್ರಿ ಕರಿಸಿದೆ ಆದುದರಿಂದ ಅನೇಕ ಯೋಜನೆಗಳನ್ನು ರೂಪಿಸಿ ಮತ್ತು ಅವುಗಳನ್ನು ಜಾರಿಗೆ ತಂದು ಗ್ರಾಮೀಣಾಭಿವೃದ್ಧಿಯನ್ನು ಸಾಧಿಸಲು ಸರ್ಕಾರೇತರ ಸಂಸ್ಥೆಗಳು ಶ್ರಮಿಸುತ್ತಿವೆ.

- ಸರ್ಕಾರೇತರ ಸಂಸ್ಥೆಗಳು ದುರ್ಬಲ ವರ್ಗಗಳ ಜನರನ್ನು ಸಂಘಟಿಸುವಲ್ಲಿ, ಗ್ರಾಮೀಣ ವಿತರಣಾ ವ್ಯವಸ್ಥೆಯನ್ನು ಸುಧಾರಿಸುವಲ್ಲಿ ಮತ್ತು ಎಲ್ಲಾ ವಿಧದ ಶೋಷಣೆಗಳನ್ನು ಪ್ರತಿಭಟಿಸುವಲ್ಲಿ ಯಶಸ್ವಿಯಾಗಿವೆ. ಎಲ್ಲಕ್ಕಿಂತ ಮಿಗಿಲಾಗಿ ಅವುಗಳು ಸ್ಥಳೀಯ ಉಪಕ್ರಮ ಮತ್ತು ಪ್ರಯತ್ನಗಳಿಗೆ ಹೊಸ ಉತ್ತೇಜನವನ್ನು ನೀಡಿವೆ.

- ಕೆಲವು ಸರ್ಕಾರೇತರ ಸಂಸ್ಥೆಗಳು ವಿಜ್ಞಾನ ಮತ್ತು ತಂತ್ರಜ್ಞಾನದ ಅಳವಡಿಕೆಯ ಕ್ಷೇತ್ರದಲ್ಲಿ ಮತ್ತು ಸ್ಥಳೀಯ ಸಂಪನ್ಮೂಲಗಳ ಬಳಕೆಯಲ್ಲಿ ಯಶಸ್ವೀ ಅವಿಷ್ಕಾರಗಳನ್ನು ಮಾಡಿವೆ. ಸರ್ಕಾರೇತರ ಸಂಸ್ಥೆಗಳು ಬಳಕೆಯಾಗದ ಗ್ರಾಮೀಣ ಸಂಪನ್ಮೂಲಗಳನ್ನು ಉಪಯೋಗಿಸಲು ಸಹಾಯ ಮಾಡುತ್ತದೆ.

- ವಯಸ್ಕರ ಶಿಕ್ಷಣದಂತಹ ಕ್ಷೇತ್ರದಲ್ಲಿ ಸರ್ಕಾರೇತರ ಸಂಸ್ಥೆಗಳು ಸರಕಾರಿ ಇಲಾಖೆಗಳಿಗಿಂತ ಮೇಲುಗೈ ಸಾಧಿಸಿವೆ. ಸ್ಥಳೀಯ ಪರಿಸರಕ್ಕೆ ಹೆಚ್ಚು ಹತ್ತಿರವಾಗಿರುವ ಸರ್ಕಾರೇತರ ಸಂಸ್ಥೆಗಳು ವಯಸ್ಕರ ಶಿಕ್ಷಣದ ತರಗತಿಗಳನ್ನು ನಡೆಸಲು ಹೆಚ್ಚು ಸೂಕ್ತವಾದವುಗಳಾಗಿವೆ.

- ಸರ್ಕಾರೇತರ ಸಂಸ್ಥೆಗಳು ಸರಕಾರದ ಚಟುವಟಿಕೆಗಳಲ್ಲಿ ಗ್ರಾಮೀಣ ಮಟ್ಟದಲ್ಲಿ ಅವ್ಯವಹಾರಗಳು ನಡೆಯದಂತೆ ಕಾರ್ಯನಿರ್ವಹಿಸುತ್ತವೆ.

- ಭೂ ಸುಧಾರಣೆ ಕಾನೂನನ್ನು ಕೂಡ ಸ್ವಯಂ ಸೇವಾ ಸಂಸ್ಥೆಗಳು ಯಶಸ್ವಿಯಾಗಿ ಜಾರಿಗೊಳಸಲು ಸಹಾಯ ಮಾಡುತ್ತವೆ. ಅದಲ್ಲದೆ ಸ್ಥಳೀಯ ನೈಸರ್ಗಿಕ ಸಂಪತ್ತನ್ನು ಸರಿಯಾದ ಪ್ರಮಾಣದಲ್ಲಿ ಬಳಸಿ ಅಲ್ಲಿನ ಜನರ ಅಭಿವೃದ್ಧಿಗೆ ಪ್ರೇರಕವಾಗುತ್ತದೆ.

- ಗ್ರಾಮೀಣ ವಲಯದ ಪ್ರಯೋಜನಕ್ಕೆ ಜಾರಿಗೊಳಸಲಾದ ಯೋಜನೆಗಳ ಉಸ್ತುವಾರಿ ಮತ್ತು ಮೌಲ್ಯಮಾಪನ ಕ್ಷೇತ್ರದಲ್ಲಿ ಸರ್ಕಾರೇತರ ಸಂಸ್ಥೆಗಳು ಸಹಕಾರಿಯಾಗಿವೆ. ಅವುಗಳು ಬಡತನ ನಿರ್ಮೂಲನ ಕಾರ್ಯಕ್ರಮಗಳನ್ನು ವಸ್ತು ನಿಷ್ಠವಾಗಿ ಪರಾಮರ್ಶಿಸುತ್ತದೆ.

- ಸರ್ಕಾರೇತರ ಸಂಸ್ಥೆಗಳು ಸ್ಥಳೀಯ ಜನರ ಮನಸ್ಸಿಗೆ ಮತ್ತು ಹೃದಯಕ್ಕೆ ಹತ್ತಿರವಾಗಿ ಕಾರ್ಯನಿರ್ವಹಿಸುತ್ತವೆ ಮತ್ತು ಜನರನ್ನು ಅಭಿವೃದ್ಧಿ ಯೋಜನೆಗಳಲ್ಲಿ ಪಾಲ್ಗೊಳ್ಳುವಂತೆ ಪ್ರೇರೇಪಿಸುತ್ತದೆ.

- ಕೇವಲ ಸರಕಾರ ಮಾತ್ರ ಜನರ ಬೇಡಿಕೆಯನ್ನು ಪೂರೈಸಲು ಸಾಧ್ಯವಿಲ್ಲ ಸರ್ಕಾರೇತರ ಸಂಸ್ಥೆಗಳು ಸರಕಾರದ ಯೋಜನೆಗಳನ್ನು ತಳಮಟ್ಟದಲ್ಲಿ ನಿರ್ವಹಿಸುವಂತೆ ಶ್ರಮಿಸುತ್ತವೆ.

- ಸರ್ಕಾರೇತರ ಸಂಸ್ಥೆಗಳು ಗ್ರಾಮೀಣ ಮಹಿಳೆಯರ ಸ್ಥಾನ ಮಾನಗಳನ್ನು ಉತ್ತಮಗೊಳಸುವುದಲ್ಲದೆ ಹಿಂದುಳಿದ ವರ್ಗದ ಜನರಿಗೆ ಶಿಕ್ಷಣವನ್ನು ನೀಡುವ ಮುಖಾಂತರ ಜನರು ಮತ್ತು ಸರಕಾರದ ನಡುವೆ ಕೊಂಡಿಯಂತೆ ಕಾರ್ಯ ನಿರ್ವಹಿಸುತ್ತದೆ.

## ಗ್ರಾಮೀಣಾಭಿವೃದ್ಧಿಯಲ್ಲಿ ತೊಡಗಿರುವಂತಹ ವಿವಿಧ ಸರ್ಕಾರೇತರ ಸಂಸ್ಥೆಗಳು :

ಭಾರತದಲ್ಲಿ ಕೈಗೊಳಲಾದ PRIA ಸಮೀಕ್ಷೆಯ ಪ್ರಕಾರ ೧೨ ಲಕ್ಷ ಅಥವಾ ೧೨ ಮಿಲಿಯನ್ ಲಾಭರಹಿತ/ ಸರ್ಕಾರೇತರ ಸಂಸ್ಥೆಗಳಿವೆ. ಈ ಪೈಕಿ ಅರ್ಧದಷ್ಟು ಅಂದರೆ ಆರು ಲಕ್ಷದಷ್ಟು ಸಂಸ್ಥೆಗಳು ಗ್ರಾಮೀಣ ಪ್ರದೇಶದಲ್ಲಿವೆ. ಇವುಗಳ ಪೈಕಿ ಶೇಖಡಾ ೫೦ ರಷ್ಟು ಲಾಭರಹಿತ ಸಂಸ್ಥೆಗಳು ಕಾನೂನಿನ ಪ್ರಕಾರ ನೊಂದಾವಣೆಯಾಗಿಲ್ಲ, ಒಟ್ಟು ೧೨ ಲಕ್ಷ ಸರ್ಕಾರೇತರ ಸಂಸ್ಥೆಗಳ ಪೈಕಿ ಶೇಕಡಾ ೮೮ ರಷ್ಟು ಸಂಸ್ಥೆಗಳು ಸಣ್ಣ ಪ್ರಮಾಣದ್ದಾಗಿವೆ. ಈ ಸಂಸ್ಥೆಗಳ ಆರ್ಥಿಕ ಪ್ರಮಾಣವನ್ನು ಅವುಗಳು ಹೊಂದಿರುವ ವೇತನ ಪಾವತಿಸಿದ ನೌಕರರನ್ನು ಆಧರಿಸಿ ಮಾಪನ ಮಾಡಲಾಗಿದೆ.

ಪ್ರತಿ ಕ್ಷೇತ್ರದಲ್ಲಿ ತೊಡಗಿರುವ ಸಂಸ್ಥೆಗಳು ಮತ್ತು ಚಟುವಟಿಕೆಗಳನ್ನು ಆಧರಿಸಿ ಭಾರತದಲ್ಲಿ ಅವುಗಳ ಸಮೀಕ್ಷೆ ನಡೆಸಲೆತ್ನಿಸಲಾಗಿದೆ. ಈ ಸಂಸ್ಥೆಗಳು ಧಾರ್ಮಿಕ ಕ್ಷೇತ್ರದಲ್ಲಿವೆ, ಸಮುದಾಯ/ಸಾಮಾಜಿಕ ಸೇವಾ ಚಟುವಟಿಕೆಗಳಲ್ಲಿವೆ, ಶಿಕ್ಷಣ, ಕ್ರೀಡೆ/ಸಂಸ್ಕೃತಿ, ಆರೋಗ್ಯ ಕ್ಷೇತ್ರಗಳಿವೆ.

### ಕಾರ್ಯ ಚಟುವಟಿಕೆಗಳ

**ಅಂಕಿ ಅಂಶಗಳ ಪಟ್ಟಿ ೨**

**ಸರಕಾರೇತರ ಸಂಸ್ಥೆಗಳ ವರ್ಗೀಕರಣ (% ಶೇಕಡಾವಾರು)**

| ರಾಜ್ಯಗಳು | ಶೇಕಡಾ |
|---|---|
| ಧರ್ಮ ಆಧರಿತ | ೨೬.೫ |
| ಸಮುದಾಯ/ಸಾಮಾಜಿಕ ಸೇವೆಗಳು | ೨೧.೫ |
| ಶಿಕ್ಷಣ | ೨೦.೪ |
| ಕ್ರೀಡೆ ಮತ್ತು ಸಂಸ್ಕೃತಿ | ೧೮.೦ |
| ಆರೋಗ್ಯ | ೬.೬ |

ಮೂಲ: ಅನುಷಂಗಿಕ ದತ್ತಾಂಶ

ಈ ಪೈಕಿ ಆರೋಗ್ಯ ಸೇವಾ ಕ್ಷೇತ್ರದಲ್ಲಿ ಅತೀ ಕಡಿಮೆ ಸರ್ಕಾರೇತರ ಸಂಸ್ಥೆಗಳಿವೆ. ಭಾರತದಲ್ಲಿ ಏಕರೂಪದ ಸ್ವಯಂ ಸೇವಾ ಕ್ಷೇತ್ರದ ಸಂಘಟನೆಗಳಿಲ್ಲ, ಈ ಕಾರಣದಿಂದ ಸರ್ಕಾರೇತರ ಸಂಸ್ಥೆಗಳ ಕುರಿತು ಸ್ಪಷ್ಟವಾದ ಸಾರ್ವಜನಿಕ ನೀತಿ ರೂಪಿಸಲಾಗಿಲ್ಲ. ಆದರೆ ಇಂತಹ ಸಾರ್ವಜನಿಕ ನೀತಿಯ ಅಗತ್ಯವಿದೆ ಏಕೆಂದರೆ ಅದು ಕೆಳಕಂಡ ಎರಡು ಅಂಶಗಳನ್ನು ಸ್ಪಷ್ಟ ಪಡಿಸಬೇಕಿದೆ.

- ಸರಕಾರ ಮತ್ತು ಸರ್ಕಾರೇತರ ಸಂಸ್ಥೆಗಳ ಸಂಬಂಧವನ್ನು ಸ್ಪಷ್ಟಪಡಿಸುವುದು.
- ವಿದೇಶಿ ನೆರವಿನ ಸ್ವರೂಪ ವಿದೇಶಿ ನೀಡಿಕೆದಾರರೊಂದಿಗೆ ಹೊಂದಬೇಕಾದ ಸಂಬಂಧದ ಸ್ವರೂಪವನ್ನು ನಿರ್ಧರಿಸುವುದು.

ಆದುದರಿಂದ ಭಾರತೀಯ ಸರ್ಕಾರೇತರ ಸಂಸ್ಥೆಗಳು ಸ್ವಯಂ ಪ್ರೇರಣೆಯಿಂದ ಪಾರದರ್ಶಕತೆ ಮತ್ತು ಉತ್ತರದಾಯಿತ್ವ ಬೆಳೆಸಿಕೊಳ್ಳಲೇಬೇಕು. ಈ ಸರ್ಕಾರೇತರ ಸಂಸ್ಥೆಗಳು ಭ್ರಷ್ಟಾಚಾರ, ಮತೀಯ ಉಗ್ರವಾದ ಮತ್ತು ರಾಷ್ಟ್ರ ವಿದ್ರೋಹದ ಕಾರ್ಯಗಳಿಂದ ದೂರ ಉಳಿಯಬೇಕು.

**ಪ್ರಸ್ತುತ ಗ್ರಾಮೀಣಾಭಿವೃದ್ಧಿಯಲ್ಲಿ ತೊಡಗಿರುವಂತಹ ಸರ್ಕಾರೇತರ ಸಂಸ್ಥೆಗಳು:**

- **ಭಾರತೀಯ ಆಗ್ರೋ ಇಂಡಸ್ಟ್ರೀಸ್ ಪೌಂಢೇಶನ್** (ಉರ್ಲಿಕಾಂಚನ್, ಪುಣೆ) :

  ಹೈಬ್ರೀಡ್ ಆಕಳು ತಳಿಗಳ ಅಭಿವೃದ್ಧಿ, ಮೇವು ಅಭಿವೃದ್ಧಿ ಮತ್ತು ಸಾಮಾಜಿಕ ಅರಣೀಕರಣ ಅಭಿವೃದ್ಧಿ ಪಡಿಸುವುದರಲ್ಲಿ ತನ್ನ ಗಮನವನ್ನು ಕೇಂದ್ರೀಕರಿಸಿದೆ.

- **ಭಾರತೀಯ ಗ್ರಾಮೀಣ ಮಹಿಳಾ ಸಂಘ** :

  ಭಾರತೀಯ ಗ್ರಾಮೀಣ ಮಹಿಳಾ ಸಂಘವು ಗ್ರಾಮೀಣ ಪ್ರದೇಶದ ಮಹಿಳೆಯರಿಗೆ ಸ್ವಾವಲಂಬನೆ ಮತ್ತು ನಾಯಕತ್ವದ ತರಬೇತಿ ಚಟುವಟಿಕೆಗಳನ್ನು ಆಯೋಜಿಸುತ್ತದೆ. ಹರಿಜನ ಸೇವಕ ಸಂಘ, ಗ್ರಾಮೀಣ ಪ್ರದೇಶದಲ್ಲಿರುವ ಹರಿಜನರ ಮಧ್ಯ ರಚನಾತ್ಮಕ ಚಟುವಟಿಕೆಗಳನ್ನು ಕೈಗೊಳ್ಳುವ ಬಗ್ಗೆ ಗಮನ ಕೇಂದ್ರೀಕರಿಸಿದೆ.

- **ಸರ್ವೋದಯ ಶ್ರಮಾದಾನ ಚಳುವಳಿ:**

  ಶ್ರೀಲಂಕಾದ ಸರ್ವೋದಯ ಶ್ರಮಾದಾನ ಚಳುವಳಿ (ಸ್ಥಾಪಕರು : ಎ.ಟಿ. ಅರಿಯರತ್ನೆ) ಸಮುದಾಯ ಅಭಿವೃದ್ಧಿಯ ಹಂಚಿಕೆಯಲ್ಲಿ ವಿಶಿಷ್ಟ ಚಳುವಳಿಯಾಗಿದೆ, ಆರಂಭದಿಂದಲೂ ಈ ಆಂದೋಲನವು ಗಾಂಧೀಜಿಯವರ ಸಿದ್ಧಾಂತಗಳಿಂದ ಪ್ರಭಾವಿತವಾಗಿದೆ. ಈ ಚಳುವಳಿಯು ಸ್ವಾವಲಂಬನೆ ಮತ್ತು ಉತ್ತಮ ಜೀವನ ಗುಣಮಟ್ಟ ಸಾಧಿಸಲು ಮತ್ತು ಜನರನ್ನು ಶಿಕ್ಷಿತರನ್ನಾಗಿ ಮಾಡುವುದಕ್ಕೆ ಒತ್ತು ನೀಡುತ್ತದೆ.

  ಈ ಸಂಸ್ಥೆಯು ತಮ್ಮ ಪ್ರದೇಶಗಳಲ್ಲಿ ಅಭಿವೃದ್ಧಿ ಯೋಜನೆಗಳನ್ನು ಸಮನ್ವಯಗೊಳಿಸುವ ಮತ್ತು ತರಬೇತಿ ಕಾರ್ಯಕ್ರಮಗಳನ್ನು ಒದಗಿಸುವ ೩೦ ಗ್ರಾಮ

ಕೇಂದ್ರಗಳನ್ನು ಹೊಂದಿವೆ. ಈ ಸಂಸ್ಥೆಯ ಕೇಂದ್ರ ಕಛೇರಿಯು ಕೊಲೊಂಬೊ ನಗರದಿಂದ ಹೊರಗಿದೆ.

ಕೊಲಂಬೊದ ಹೊರಗಿರುವ ಅಪೆಕ್ಸ್ ಸಂಸ್ಥೆಯು ನೀತಿಗಳು ಮತ್ತು ಆದ್ಯತೆಗಳಿಗೆ ಸಂಬಂಧಿಸಿದ ಮತ್ತು ಹೊಸ ಅಭಿವೃದ್ಧಿ ಕಾರ್ಯಕ್ರಮಗಳನ್ನು ಹಮ್ಮಿಕೊಳ್ಳುವ ನಿರ್ಧಾರ ಕೈಗೊಳ್ಳುತ್ತದೆ. ಸಣ್ಣ ಪ್ರಮಾಣದ ಅಭಿವೃದ್ಧಿ ಯೋಜನೆಗಳಿಗೆ ಕಡಿಮೆ ಬಡ್ಡಿ ದರದಲ್ಲಿ ಸಾಲ ಒದಗಿಸುವ ಉದ್ದೇಶದಿಂದ ಚಳುವಳಿಗೆ ಆವರ್ತನ ನಿಧಿಯೊಂದನ್ನು ಸ್ಥಾಪಿಸಿದೆ.

- **ಭೂಮಿ ಸೇನಾ ಆಂದೋಲನ :**

ಸ್ಥಳೀಯ ಮೇಲ್ವರ್ಗದ ಜನರು ಆದಿ ವಾಸಿಗಳನ್ನು ದಮನಿಸುತ್ತಿರುವುದಕ್ಕೆ ಪ್ರತಿಯಾಗಿ, ಮಹಾರಾಷ್ಟ್ರದಲ್ಲಿ ಭೂಮಿ ಸೇನಾ ಆಂದೋಲನವು ಪ್ರಾರಂಭವಾಯಿತು. ಭೂ ಮಾಲಿಕರಿಂದ ತಮ್ಮ ಭೂಮಿಯನ್ನು ಪಡೆದುಕೊಳ್ಳಲು ಆದಿವಾಸಿಗಳಿಗೆ ಈ ಭೂಮಿ ಸೇನಾ ಆಂದೋಲನವು ಸಹಾಯ ಮಾಡಿತು. ಸಾಲ ನೀಡುವುದು, ಬಾವಿಗಳನ್ನು ತೋಡುವುದು, ಮೇವು ವ್ಯಾಪಾರ ಇತ್ಯಾದಿ ಚಟುವಟಿಕೆಗಳಿಗೆ ಭೂಮಿ ಸೇನಾ ಕ್ರಮೇಣ ತನ್ನ ಚಟುವಟಿಕೆಗಳನ್ನು ವಿಸ್ತರಿಸಿತು. ಭೂಮಿ ಸೇನಾ ಸಂಸ್ಥೆಯು ಕುಡಿತ, ಜೀತ ಪದ್ಧತಿ, ಸಾಂಸ್ಕೃತಿಕ ಆಚರಣೆಗಳಿಗೆ ಅನಾವಶ್ಯಕ ಮತ್ತು ದುಂದು ವೆಚ್ಚ ಮತ್ತು ಸಾಮಾಜಿಕ ರೀತಿ ರಿವಾಜುಗಳ ವಿರುದ್ಧ ಅಭಿಯಾನವನ್ನು ಆರಂಭಿಸಿದೆ. ಗ್ರಾಮೀಣ ವಲಯದ ಮಿತವ್ಯಯಕಾರಿ ಸಂಘಟನೆಯ ಬಗ್ಗೆ ಕೂಡ ಭೂಮೀ ಸೇನಾ ಸಂಸ್ಥೆಯು ವಿಶೇಷ ಒತ್ತನ್ನು ನೀಡಿದೆ.

- **ಸೋಶಿಯಲ್ ವರ್ಕ್ ರಿಸರ್ಚ್ ಸೆಂಟರ್ (ಎಸ್. ಡಬ್ಲು. ಆರ್.ಸಿ) :**

ರಾಜಸ್ತಾನದ ತಿಲೋನಿಯಲ್ಲಿರುವ ಸೋಶಿಯಲ್ ವರ್ಕ್ ರಿಸರ್ಚ್ ಸೆಂಟರ್ ಒಂದು ಗೌರವಾನ್ವಿತ ಸರ್ಕಾರೇತರ ಸಂಸ್ಥೆಯಾಗಿ ಮೂಡಿ ಬಂದಿದೆ. ವಿವಿಧ ಕ್ಷೇತ್ರಗಳಲ್ಲಿ ವೃತ್ತಿಪರ ತರಬೇತಿ ಪಡೆದ ನುರಿತ ಯುವಜನರು ಈ ಸಂಸ್ಥೆಯನ್ನು ನಡೆಸುತ್ತಾರೆ. ಗ್ರಾಮೀಣಾಭಿವೃದ್ಧಿ ಮತ್ತು ಕ್ರಿಯೆ ಮತ್ತು ಸಂಶೋಧನೆಯ ನಡುವೆ ಬಲವಾದ ಸಂಪರ್ಕವನ್ನು ಖಚಿತ ಪಡಿಸಲು ಸಮಗ್ರ ವಿಧಾನವೊಂದಕ್ಕೆ ಈ ಸಂಸ್ಥೆಯು ಒತ್ತು ನೀಡಿದೆ. ಆರ್ಥಿಕವಾಗಿ ದುರ್ಬಲವಾಗಿರುವ ಗ್ರಾಮೀಣ ವಲಯಕ್ಕೆ ಸೇವೆ ಒದಗಿಸಲು ಔಪಚಾರಿಕ ಶೈಕ್ಷಣಿಕ ಅರ್ಹತೆಯ ಅಗತ್ಯವಿಲ್ಲ ಎಂಬುದನ್ನು ಎಸ್.ಡಬ್ಲು.ಆರ್.ಸಿ. ತೋರಿಸಿಕೊಟ್ಟಿದೆ.

- **ದಾಸೋಲಿ ಗ್ರಾಮ ಸ್ವರಾಜ್ಯ ಮಂಡಲಿ (ಡಿ.ಜಿ.ಎಸ್.ಎಂ) :**

೧೯೬೪ ರಲ್ಲಿ ಉತ್ತರ ಪ್ರದೇಶದ ಮಧ್ಯ ಹಿಮಾಲಯ ಪ್ರದೇಶದಲ್ಲಿ, ಚಮೋಲಿ ಎಂಬ ಜಿಲ್ಲೆಯಲ್ಲಿ ದಾಸೋಲಿ ಗ್ರಾಮ ಸ್ವರಾಜ್ಯ ಮಂಡಲಿ ಎಂಬ ಸರ್ಕಾರೇತರ ಸಂಸ್ಥೆಯನ್ನು ಸ್ಥಾಪಿಸಲಾಗಿದೆ. ಉತ್ಸಾಹಿ ಜನರಿಂದ ಸ್ಥಾಪಿತವಾದ ಈ ಸರ್ಕಾರೇತರ ಸಂಸ್ಥೆಯು ಅರಣ್ಯ ಸಂಪತ್ತಿನ ರಕ್ಷಣೆ, ಗ್ರಾಮೀಣ ಯುವ ಜನರಿಗೆ ಉದ್ಯೋಗವಕಾಶಗಳನ್ನು ಒದಗಿಸುವುದು ಮತ್ತು ಗ್ರಾಮೀಣ ಕೈಗಾರಿಕೆಗಳ ಉತ್ತೇಜನ ಇತ್ಯಾದಿ ಗುರಿಗಳನ್ನಿರಿಸಿದೆ. ಅರಣ್ಯ ಆಧಾರಿತ ಕೈಗಾರಿಕೆಗಳ ಅಭಿವೃದ್ಧಿಗೆ ಹೆಚ್ಚಿನ ಒತ್ತು ನೀಡಲಾಗಿದೆ. ಕುಡಿತದ ದುಷ್ಪರಿಣಾಮಗಳ ಬಗ್ಗೆ ಗ್ರಾಮೀಣ ಜನರಿಗೆ ಶಿಕ್ಷಣ ನೀಡುವ ಯೋಜನೆಯನ್ನು ದಾಸೋಲಿ ಗ್ರಾಮ ಸ್ವರಾಜ್ಯ ಮಂಡಲಿ ಹಮ್ಮಿಕೊಂಡಿದೆ ಮತ್ತು ಗ್ರಾಮೀಣ ಪ್ರದೇಶದ ಕಲೆ ಮತ್ತು ಸಂಸ್ಕೃತಿಯನ್ನು ಉಳಿಸಲು ಹೋರಾಡುತ್ತಿದೆ.

- **ಮೈರಾಡ :**

ಮೈರಾಡ ಒಂದು ಸರ್ಕಾರೇತರ ಸಂಸ್ಥೆಯಾಗಿದೆ. ಈ ಸಂಸ್ಥೆಯನ್ನು ಶ್ರೀಕಾಂತ್ ಮತ್ತು ಅವರ ಗೆಳೆಯುರು ೧೯೮೦ ರ ದಶಕದಲ್ಲಿ ಪ್ರಾಯೋಜಿಸಿದರು ಇದು ಮೈಸೂರು ಜಿಲ್ಲೆಯ ಹುಣಸೂರು ಮತ್ತು ಹೆಚ್. ಡಿ. ಕೋಟೆ, ಚಾಮರಾಜನಗರ ಜಿಲ್ಲೆಯ ಕೊಳ್ಳೇಗಾಲ ಮತ್ತು ಗುಂಡ್ಲು ಪೇಟೆ ಹಾಗೂ ಕೊಡಗು ಜಿಲ್ಲೆಗಳ ಬುಡಕಟ್ಟು ಜನರ ಅಭಿವೃದ್ಧಿಯಲ್ಲಿ ತೊಡಗಿದೆ.

ಮೈರಾಡ ಸಂಸ್ಥೆಯ ಉದ್ದೇಶಗಳೇನೆಂದರೆ :

- ಗಿರಿಜನರನ್ನು ಅರಣ್ಯಗಳಿಂದ ಮತ್ತು ಜಮೀನುಗಳಿಂದ ಒಕ್ಕಲೆಬ್ಬಿಸುವುದನ್ನು ತಪ್ಪಿಸಿ ಗಿರಿಜನರಿಗಾಗಿ ಸರಕಾರ ನೀಡುತ್ತಿರುವ ಎಲ್ಲಾ ಸವಲತ್ತುಗಳನ್ನು ಅವರಿಗೆ ತಲುಪಿಸುವುದು.
- ಬುಡಕಟ್ಟು ಜನರ ಮೇಲಾಗುತ್ತಿರುವ ದೌರ್ಜನ್ಯಗಳನ್ನು ಕಡಿಮೆಗೊಳಿಸಿ ಬುಡಕಟ್ಟು ಜನರಲ್ಲಿ ಸಂಘಟನೆ ಮತ್ತು ನಾಯಕತ್ವವನ್ನು ಬೆಳೆಸುವುದು.

- **ಶ್ರೀ ವಿವೇಕಾನಂದ ಗಿರಿಜನ ಅಭಿವೃದ್ಧಿ ಮತ್ತು ಕಲ್ಯಾಣ ಕೇಂದ್ರ :**

ಈ ಸರ್ಕಾರೇತರ ಸಂಸ್ಥೆಯನ್ನು ಡಾ.ಸುದರ್ಶನ್ ಅವರು ೧೯೮೦ ರ ದಶಕದ ಆರಂಭದಲ್ಲಿ ಬಿಳಗಿರಿ ರಂಗನ ಬೆಟ್ಟದ ಪ್ರದೇಶದಲ್ಲಿ ಸ್ಥಾಪಿಸಿದರು. ಇವರು ಶ್ರೀ ರಾಮಕೃಷ್ಣ ಪರಮಹಂಸ ಮತ್ತು ಶ್ರೀ ಸ್ವಾಮಿ ವಿವೇಕಾನಂದರ ಜೀವನ ದರ್ಶನದಿಂದ ಪ್ರೇರಿತರಾಗಿ ಸಮಾಜ ಸೇವಾ ಕ್ಷೇತ್ರವನ್ನು ಪ್ರವೇಶಿಸಿದವರು.

೧೯೮೦ ರ ಸಮಯದಲ್ಲಿ ಬಿಳಿಗಿರಿ ರಂಗನ ಬೆಟ್ಟದ ಪ್ರದೇಶದಲ್ಲಿರುವ ಸೋಲಿಗ ಬುಡಕಟ್ಟಿನ ಜನರು ಆರೋಗ್ಯ ಸಮಸ್ಯೆಗಳಿಂದ, ಆಹಾರ ಕೊರತೆಯಿಂದ, ಭೌತಿಕ ಸುರಕ್ಷತೆಯ ಕೊರತೆಯಿಂದ ಭಾಧೆ ಪಡುತ್ತಿದ್ದರು. ಸೋಲಿಗರನ್ನು ಇಂದು ಎಲ್ಲಾ ಸಮಸ್ಯೆಗಳಿಂದ ಡಾ॥ ಎಚ್.ಆರ್.ಸುದರ್ಶನ್ ಮತ್ತು ತಂಡದವರು ಬಹುಮಟ್ಟಿಗೆ ಮುಕ್ತರನ್ನಾಗಿಸಿದ್ದಾರೆ. ಸೋಲಿಗರಲ್ಲಿ ಸ್ವಾಭಿಮಾನ ಮತ್ತು ಆತ್ಮಗೌರವನ್ನು ಡಾ॥ ಸುದರ್ಶನ್ ಹುಟ್ಟಿಸಿದ್ದಾರೆ.

## ರಾಷ್ಟ್ರೀಯ ಮಟ್ಟದಲ್ಲಿರುವ ಸರ್ಕಾರೇತರ ಸಂಸ್ಥೆಗಳು :

- **ಕಪಾರ್ಟ್ :**

ಭಾರತದಲ್ಲಿ ಕಪಾರ್ಟ್ (CAPART) ಅಂದರೆ ಗ್ರಾಮೀಣ ತಂತ್ರಜ್ಞಾನ ಮತ್ತು ಜನತೆಯ ಕ್ರಿಯಾ ಶಕ್ತಿಯ ಪ್ರಗತಿಗಾಗಿ ಆಯೋಗ ಗ್ರಾಮೀಣಾಭಿವೃದ್ಧಿಗಾಗಿ ತನ್ನ ಸ್ವಯಂ ಸೇವಾ ಕಾರ್ಯವನ್ನು ಉತ್ತೇಜಿಸುವ ರಾಷ್ಟ್ರೀಯ ಸಂಸ್ಥೆಯಾಗಿದೆ.

ಈ ಕಪಾರ್ಟ್ ಸಂಸ್ಥೆಯನ್ನು ಕ್ರಿ.ಶ ೧೯೮೦ ರಲ್ಲಿ ನೊಂದಾಯಿಸಲಾಯಿತು. ಈ ಸಂಸ್ಥೆಯ ಕೇಂದ್ರ ಕಛೇರಿಯು ನವದೆಹಲಿಯಲ್ಲಿದೆ. ಇದರ ಪ್ರಮುಖ ಉದ್ದೇಶವು ಗ್ರಾಮೀಣಾಭಿವೃದ್ಧಿಯಲ್ಲಿ ಸ್ವಯಂ ಸೇವಾ ಕ್ರಿಯೆಯನ್ನು ಉತ್ತೇಜಿಸುವುದಾಗಿದೆ. ಕಪಾರ್ಟ್ ಸಂಸ್ಥೆಯು ವಿವಿಧ ಸರ್ಕಾರೇತರ ಸಂಸ್ಥೆಗಳಿಗೆ ಹಣಕಾಸಿನ ಅನುದಾನವನ್ನು ನೀಡುತ್ತದೆ.

ಕಪಾರ್ಟ್‌ನ ನಿಧಿಯು ಗ್ರಾಮೀಣಾಭಿವೃದ್ಧಿ ಮತ್ತು ಉದ್ಯೋಗದ ಕುರಿತು ಕೇಂದ್ರ ಸಚಿವಾಲಯ ನೀಡುವ ಹಣಕಾಸು ಅನುದಾನಗಳನ್ನು ಒಳಗೊಳ್ಳುತ್ತದೆ. ಕಪಾರ್ಟ್‌ನ ಆಡಳಿತ ಮಂಡಳಿ ಕೇಂದ್ರ ರಾಜ್ಯ ಸರಕಾರಗಳ ವಿವಿಧ ಇಲಾಖೆಗಳಿಂದ ಅನುದಾನ ಪಡೆಯಬಹುದು ಹಾಗೂ ಇತರ ಮೂಲಗಳಿಂದ ದೇಣಿಗೆ ಮತ್ತು ವಂತಿಗೆಗಳನ್ನು ಸರಕಾರದ ಅನುಮೋದನೆಯೊಂದಿಗೆ ಪಡೆಯಬಹುದು. ಕಪಾರ್ಟ್ ಸಂಸ್ಥೆಯು ಜೈಪುರ, ಅಹಮದಾಬಾದ್, ಹೈದರಾಬಾದ್, ಭುವ್ವನೇಶ್ವರ, ಗಂವಾಹಟಿ ಮತ್ತು ಲಕ್ನೋಗಳಲ್ಲಿ ೮ ಪ್ರಾದೇಶಿಕ ಸಮಿತಿ ಕಾರ್ಯಾಲಯಗಳನ್ನು ಸ್ಥಾಪಿಸಿದೆ. ಅದು ತನ್ನ ಕಾರ್ಯ ಚಟುವಟಿಕೆಗಳನ್ನು ಗಣನೀಯವಾಗಿ ವಿಕೇಂದ್ರೀಕೃತಗೊಳಿಸಿದೆ.

ಸರ್ಕಾರೇತರ ಸಂಸ್ಥೆಗಳು ಗ್ರಾಮೀಣ ಜನತೆಗೆ ವ್ಯಾಪಕ ಸೇವೆಗಳನ್ನು ಒದಗಿಸುತ್ತವೆ. ಆದುದರಿಂದ ಸರ್ಕಾರೇತರ ಸಂಸ್ಥೆಗಳ ಆರೋಗ್ಯಕರ ಬೆಳವಣಿಗೆಗೆ ಸೂಕ್ತ ವಾತಾವರಣ ಕಲ್ಪಿಸುವುದು ಅತ್ಯಾವಶ್ಯಕವಾಗಿದೆ.



# ಅಧ್ಯಾಯ – ೩

# ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಸರ್ಕಾರೇತರ ಸಂಸ್ಥೆಗಳ ಸ್ಥಿತಿಗತಿ

## ಅಧ್ಯಾಯ–೩

# ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಸರ್ಕಾರೇತರ ಸಂಸ್ಥೆಗಳ ಸ್ಥಿತಿಗತಿ

### ೩.೧ ಪ್ರವೇಶ :

ಗ್ರಾಮೀಣಾಭಿವೃದ್ಧಿಯು ಇಂದು ಬಹುದೊಡ್ಡ ಸಂಕೀರ್ಣ ಸವಾಲೆಂದೇ ಪರಿಗಣಿಸಲ್ಪಟ್ಟಿದೆ. ಅದಕ್ಕಾಗಿ ವಿವಿಧ ನೆಲೆಯಲ್ಲಿ ಬೇರೆ ಬೇರೆ ಸಂಸ್ಥೆಗಳು ಅಭಿವೃದ್ಧಿ ಹಸ್ತಕ್ಷೇಪ ನಡೆಸಬೇಕೆಂದು ಸರಕಾರ ಬಯಸುತ್ತದೆ. ಅಂತಹ ಪ್ರಯತ್ನಗಳಿಗೆ ಸರಕಾರವೇ ಬೆಂಬಲವನ್ನು ಸೂಚಿಸುತ್ತದೆ. ಇಂದು ಸರಕಾರ ಮತ್ತು ಮಾರುಕಟ್ಟೆಗಳು ಪರಿಣಾಮಕಾರಿಯಾಗಿ ಸೇವೆಗಳನ್ನು ಪೂರೈಸಲು ಸಾಧ್ಯವಾಗದಿರುವ ಕ್ಷೇತ್ರಗಳಲ್ಲಿ ಸಾಮಾನ್ಯ ಜನರು ಅವುಗಳನ್ನು ಪೂರೈಸುತ್ತಿದ್ದಾರೆ. ಈ ಸಾಮಾನ್ಯ ಜನರು ಅವಿಷ್ಕಾರವಂತರಲ್ಲ ನಿಜ. ಆದರೆ ಅವರು ಪ್ರಾಮಾಣಿಕ ಸಾಮಾಜಿಕ ಸೇವಾ ಕಾರ್ಯಕರ್ತರಾಗಿದ್ದಾರೆ.

ಪ್ರಸ್ತುತ ಹೊಸದಾಗಿ ಸ್ಥಾಪಿಸಲ್ಪಡುತ್ತಿರುವ ಬಹುತೇಕ ಸರ್ಕಾರೇತರ ಸಂಸ್ಥೆಗಳ ರೂವಾರಿಗಳು/ಪ್ರಾಯೋಜಕರು ಸಾಮಾನ್ಯ ಜನರೇ ಆಗಿದ್ದಾರೆ. ಇವರು ಹೆಚ್ಚು ದಕ್ಷರಾದ ಮತ್ತು ಅತ್ಯಾಧುನಿಕವಾಗಿ ತರಪೇತಾದ ಸಿಬ್ಬಂಧಿಯನ್ನೆನೂ ಆಕರ್ಷಿಸುವುದಿಲ್ಲ. ಹಳೆಯ ದೊಡ್ಡ ದೊಡ್ಡ ಸರ್ಕಾರೇತರ ಸಂಸ್ಥೆಗಳು ಇಂದು ಚಲನ–ಶೀಲವಾಗಿಲ್ಲ. ಆದ್ದರಿಂದ ಅವುಗಳು ಇಂದಿನ ಯುವಕರಿಗೆ ಆಕರ್ಷಕವಾಗಿಲ್ಲ. ಆದರೆ ಹಿಂದಿನ ಕೆಲವು ವರ್ಷಗಳಿಗೆ ಹೋಲಿಸಿದಂತೆ ಪ್ರಸ್ತುತದ ಉದಾರೀಕೃತ ಮಾರುಕಟ್ಟೆ ಆರ್ಥಿಕತೆ ಪ್ರತಿಭಾವಂತ ಯುವಜನರಿಗೆ ಹೆಚ್ಚು ಆಕರ್ಷಕವಾದ ಅವಕಾಶಗಳನ್ನು ಹುಟ್ಟು ಹಾಕುತ್ತಿದೆ.

"ಕಳೆದ ದಶಕಗಳಲ್ಲಿ ಸರ್ಕಾರೇತರ ಕ್ಷೇತ್ರದ ನಾಯಕರು ಹೊಂದಿದ್ದಕ್ಕಿಂತ ಭಿನ್ನವಾದ ಆಶೋತ್ತರಗಳನ್ನು ಮತ್ತು ಪ್ರೇರಣೆಗಳನ್ನು ಪಸ್ತುತದ ತಲೆಮಾರಿನ ಎನ್.ಜಿ.ಒ ಕಾರ್ಯಕರ್ತರು ಹೊಂದಿದ್ದಾರೆ. ವಯಕ್ತಿಕ ಅಗತ್ಯದ ಅನೇಕ ಸೂತ್ರಗಳು ಅಪಾರವಾಗಿ ಸಾಮಾಜಿಕವಾಗಿ ಪ್ರೇರಿತವಾದ ಜನರಿಂದ ಹುಟ್ಟಿಕೊಂಡಿವೆ. ಈ ಸೂತ್ರಗಳು ಪ್ರಸ್ತುತದ ಸಂದರ್ಭದಲ್ಲಿ ಬದಲಾಗಬೇಕು. ಏಕೆಂದರೆ ಇಂದು ಜನರು ವಿಭಿನ್ನ ಪ್ರೇರಣೆಗಳನ್ನು ಮತ್ತು ಪ್ರವೃತ್ತಿಗಳನ್ನು ಹೊಂದಿದ್ದಾರೆ" ಕತಾರ್ ಸಿಂಗ್ (೧೯೯೯), Rural Development (New Delhi : Sage Publications, PP 284).

ಇತ್ತೀಚಿನ ವರ್ಷಗಳಲ್ಲಿ ಪ್ರಾಯೋಜಕರು ಸಣ್ಣ ಪ್ರಮಾಣದ ಸರ್ಕಾರೇತರ ಸಂಸ್ಥೆಗಳನ್ನೇ ಇಷ್ಟಪಡುತ್ತಿದ್ದಾರೆ. ಹೀಗಾಗಿ ಸಣ್ಣ ಸಣ್ಣ ಸರ್ಕಾರೇತರ ಸಂಸ್ಥೆಗಳು ಅಪಾರವಾಗಿ ಬೆಳೆಯುತ್ತಿವೆ. ಇದು ಪ್ರಾಯೋಜಿಕ ಸಂಸ್ಥೆಗಳು ಹಿಂದಿಗಿಂತ ಹೆಚ್ಚು ಕ್ರಿಯಾತ್ಮಕ ಪಾತ್ರವಹಿಸುವಚಿತೆ ಮಾಡಿವೆ.

ಅನೇಕ ಸಂಸ್ಥೆಗಳು ಈಗ ಸಂಪನ್ಮೂಲ ಕೇಂದ್ರಗಳಂತೆ ಕಾರ್ಯಚರಿಸುತ್ತಿವೆ. ಅವುಗಳು ಕಾರ್ಯತಂಡಗಳ ಸಾಮರ್ಥ್ಯ ನಿರ್ಮಿಸುವ, ಅವುಗಳ ಕಾರ್ಯಕ್ರಮಗಳನ್ನು ಯೋಜಿಸುವ ಮತ್ತು ಜಾರಿಗೊಳಸುವ ಸಂಸ್ಥೆಗಳಾಗಿಯೂ ಕಾರ್ಯಾಚರಿಸುತ್ತಿವೆ.

೧೯೯೦ ರ ದಶಕದಲ್ಲಿ ಭಾರತದಲ್ಲಿ ಸರ್ಕಾರೇತರ ಸಂಸ್ಥೆಗಳ ಕಾರ್ಯಚಟುವಟಿಕೆಗಳು ವ್ಯಾಪಕವಾಗಿ ವಿಸ್ತರಣೆಗೊಂಡಿತು. ಇಂದು ಸ್ವಯಂ ಸೇವೆಯು ಪ್ರತಿಷ್ಠಿತರಿಗೆ ಸಂಬಂಧಿಸಿದ ವಿಷಯ ಮಾತ್ರ ಅಲ್ಲ. ಏಕೆಂದರೆ ಪ್ರಸ್ತುತದಲ್ಲಿ ಅಭಿವೃದ್ಧಿ ಕಾರ್ಯವನ್ನು ಸಾಮಾನ್ಯ ಮನುಷ್ಯನ ವೃತ್ತಿಪರ್ಯಾಯವೆಂದೇ ಪರಿಗಣಿಸಲಾಗುತ್ತಿದೆ. ಸರ್ಕಾರೇತರ ಸಂಸ್ಥೆಗಳೊಂದಿಗೆ ಕಾರ್ಯಾಚರಿಸುವ ವೃತ್ತಿಪರ ಸಾಮಾಜಿಕ ಸೇವಾ ಕಾರ್ಯಕರ್ತರು ಅರ್ಥಪೂರ್ಣವಾದ ಸಾಮಾಜಿಕ ಚಟುವಟಿಕೆಗಳನ್ನು ಕೈಗೊಳ್ಳುವ ಅಗತ್ಯವಿದೆ. ಸರ್ಕಾರೇತರ ಸಂಸ್ಥೆಗಳು ಉನ್ನತ ಗುಣದರ್ಜೆಯ ಅಭಿವೃದ್ಧಿ ಸೇವೆಗಳನ್ನು ಪೂರೈಸಬಹುದು ಎಂಬುದನ್ನು ಸರಕಾರವೇ ಗುರುತಿಸಿಕೊಂಡಿದೆ. ಈ ಕಾರಣದಿಂದಾಗಿ ಸರ್ಕಾರೇತರ ಸಂಸ್ಥೆಗಳ ಬಗ್ಗೆ ಎಲ್ಲರ ನಿರೀಕ್ಷೆ ಎತ್ತರಗೊಳ್ಳುತ್ತಿದೆ.

## ೩.೨ ಅಧ್ಯಯನ ಪ್ರದೇಶದ ಸಮಾಜೋ – ಆರ್ಥಿಕ ಸ್ಥೂಲ ಪರಿಚಯ :

### ದಕ್ಷಿಣ ಕನ್ನಡ ಜಿಲ್ಲೆಯ ಇತಿಹಾಸ :

ಕರ್ನಾಟಕದ ಕರಾವಳಿ ಜಿಲ್ಲೆಗಳಲ್ಲಿ ಒಂದಾದ ದಕ್ಷಿಣ ಕನ್ನಡ ಜಿಲ್ಲೆಯು ವಿಶಿಷ್ಟವಾದ ಪ್ರಾಕೃತಿಕ ಲಕ್ಷಣ ಹಾಗೂ ಹವಾಗುಣವನ್ನು ಒಳಗೊಂಡಿದೆ. ಕ್ರಿಸ್ತಶಕಾದಿಯಿಂದಲೂ ಈ ಪ್ರದೇಶಕ್ಕೆ ಗ್ರೀಕರು ಬಳಿಕ ಅರಬರು, ಪೋರ್ಚುಗೀಸರು, ಡಚ್ಚರು, ಆಂಗ್ಲರು ಮೊದಲಾದ ವಿದೇಶೀಯರ ಸಂಪರ್ಕವಾದದ್ದರಿಂದ ಇಲ್ಲಿನವರ ಸಾಮಾಜಿಕ, ಆರ್ಥಿಕ ಹಾಗೂ ಧಾರ್ಮಿಕ ಬದುಕು ರಾಜ್ಯದ ಇತರ ಭಾಗಕ್ಕಿಂತ ಸಾಕಷ್ಟು ಭಿನ್ನವಾಗಿ ರೂಪುಗೊಳ್ಳಲು ಕಾರಣವಾಗಿದೆ. ಇಷ್ಟಲ್ಲದೆ, ರಾಜಕೀಯವಾಗಿಯೂ ಈ ಪ್ರಾಂತ್ಯವು ಬೇರೆ ಬೇರೆ ರಾಜರು, ಸ್ಥಳೀಯ ಸಾಮಂತರು ಮೊದಲಾದವರ ಆಡಳಿತಕ್ಕೆ ಒಳಗಾದ ಪರಿಣಾಮವಾಗಿ, ಆಯಾ ಸಂದರ್ಭಗಳಲ್ಲಿ ಇತರ ಭಾಗಗಳಿಂದ ವಿವಿಧ ಜಾತಿ, ಸಮುದಾಯಗಳು ಇಲ್ಲಿಗೆ ವಲಸೆ ಬಂದು ನೆಲೆ ನಿಂತದ್ದರಿಂದಲೂ, ಆ ಮೊದಲು ಸ್ಥಳೀಯವಾಗಿಯೇ ಇಲ್ಲಿ ಇದ್ದವರ ಜೀವನಕ್ರಮಗಳಿಂದಾಗಿಯೂ

ಒಟ್ಟಾರೆ ಇಲ್ಲಿನ ಜನಜೀವನವು ವಿಶಿಷ್ಟವಾಗಿ ರೂಪುಗೊಂಡಿರುವುದು ಮೇಲ್ನೋಟಕ್ಕೆ ನಮ್ಮ ಗಮನಕ್ಕೆ ಬರುತ್ತದೆ.

ದ್ರಾವಿಡ ಭಾಷೆಗಳಲ್ಲಿ ಒಂದಾದ ತುಳುವು ಇಲ್ಲಿನ ಮೂಲನಿವಾಸಿಗಳ ಭಾಷೆ ಆದುದರಿಂದ ಪ್ರಸ್ತುತ ಆಡಳಿತಾತ್ಮಕವಾಗಿ ಈ ಪ್ರದೇಶವನ್ನು ದಕ್ಷಿಣ ಕನ್ನಡ ಜಿಲ್ಲೆ ಎಂದು ಹೆಸರಿಸಿದರೂ, ಸಾಂಸ್ಕೃತಿಕವಾಗಿ ಅದನ್ನು ತುಳುನಾಡು ಎಂದೇ ಹಿಂದಿನಿಂದಲೂ ಗುರುತಿಸಲಾಗುತ್ತಿದೆ. ಪಶ್ಚಿಮ ಘಟ್ಟ ಶ್ರೇಣಿಯು ಈ ಭಾಗವನ್ನು ರಾಜ್ಯದ ಇತರ ಪ್ರಧಾನ ಭಾಗದಿಂದ ಪ್ರತ್ಯೇಕರಿಸಿದೆ ಅಂತೆಯೇ ವ್ಯವಹಾರಿಕವಗಿ ಇಲ್ಲಿನ ಜನರು ತಮ್ಮನ್ನು ಘಟ್ಟದ ಕೆಳಗಿನವರೆಂದೂ ಅದರ ಆಚೆಯವರನ್ನು ಘಟ್ಟದ ಮೇಲಿನವರೆಂದೂ ಗುರುತಿಸಿಕೊಳ್ಳುವ ರೂಢಿಯಿದೆ. ಆಡಳಿತ ಕಾರಣಕ್ಕಾಗಿ ಉಡುಪಿ ಪರಿಸರವನ್ನು ಮಂಗಳೂರು ಪರಿಸರದಿಂದ ವಿಭಾಗಿಸಿದ್ದರೂ, ಆಂತರಿಕವಾಗಿ ಈ ಪ್ರಾಂತ್ಯವು ಒಂದೇ ಬಗೆಯ ಸಾಮಾಜಿಕ, ಸಾಂಸ್ಕೃತಿಕ ಗುಣವಿಶೇಷಗಳನ್ನು ಒಳಗೊಂಡಿದೆ ಎಂಬುದನ್ನೂ ಗಮನದಲ್ಲಿಟ್ಟುಕೊಳ್ಳ ಬೇಕಾಗುತ್ತದೆ. ಕೆಲವೊಂದು ಜಾತಿ ಸಮೂದಾಯಗಳು ಎರಡೂ ಜಿಲ್ಲೆಗಳಲ್ಲಿ ಸಮಾನವಾಗಿವೆ. ಅವರ ಆಚಾರ ಸಂಪ್ರದಾಯಗಳು, ದೈವ ಆರಾಧನೆಗಳು ಬಹುಮಟ್ಟಿಗೆ ಒಂದೇ ಬಗೆಯಾಗಿವೆ. ಆದರೆ ಪ್ರಸ್ತುತ ಅಧ್ಯಯನದಲ್ಲಿ ಸರ್ಕಾರೇತರ ಸಂಸ್ಥೆಗಳು ಮತ್ತು ದಕ್ಷಿಣ ಕನ್ನಡ ಜಿಲ್ಲೆಯ ಗ್ರಾಮೀಣ ಸ್ಥಿತಿಗತಿಗಳ ಬಗ್ಗೆ ಪರಿಚಯವನ್ನು ಮಡುವ ಪ್ರಯತ್ನವನ್ನು ಮಾಡಲಾಗಿದೆ.

೧೮೬೦ರ ಹಿಂದೆ ದಕ್ಷಿಣ ಕನ್ನಡ ಮತ್ತು ಉತ್ತರ ಕನ್ನಡ ಜಿಲ್ಲೆಗಳನ್ನು ಒಟ್ಟಾಗಿ ಕೆನರಾ ಎಂದು ಕರೆಯಲಾಗುತಿತ್ತು.೧೮೬೦ರಲ್ಲಿ ಬ್ರಿಟಿಷರು ಈ ಭಾಗವನ್ನು ಉತ್ತರ ಕೆನರ ಮತ್ತು ದಕ್ಷಿಣ ಕೆನರ ಎಂದು ವಿಂಗಡಿಸಿದರು.೧೮೬೨ರಲ್ಲಿ ಉತ್ತರ ಕೆನರವನ್ನು ಬೋಂಬೆ ಪ್ರೆಸಿಡೆನ್ಸಿ ಹಾಗೂ ದಕ್ಷಿಣ ಕೆನರವನ್ನು ಮದ್ರಾಸ್ ಪ್ರೆಸಿಡೆನ್ಸಿಗೆ ಸೇರಿಸಲಾಯಿತು. ಕುಂದಾಪುರ ತಾಲೂಕು ಮೊದಲು ಉತ್ತರ ಕೆನರದಲ್ಲಿದ್ದರೂ ನಂತರ ದಕ್ಷಿಣ ಕೆನರಕ್ಕೆ ಸೇರಿಸಲಾಯಿತು.

ಸ್ವಾತಂತ್ರ್ಯದ ನಂತರ ಈಗಿನ ದಕ್ಷಿಣ ಕನ್ನಡ ಜಿಲ್ಲೆ, ಉಡುಪಿ ಹಾಗೂ ಕಾಸರಗೋಡು ಜಿಲ್ಲೆಗಳನ್ನು ಒಳಗೊಂಡಿತ್ತು. ೧೯೫೬ರ ಪುನರ್ ವಿಂಗಡನೆ ಸಂದರ್ಭದಲ್ಲಿ ಅವಿಭಜಿತ ದಕ್ಷಿಣ ಕನ್ನಡವನ್ನು ಮೈಸೂರು ರಾಜ್ಯಕ್ಕೆ ಹಾಗೂ ಕಾಸರಗೋಡು ಜಿಲ್ಲೆಯನ್ನು ಕೇರಳ ರಾಜ್ಯಕ್ಕೆ ಸೇರಿಸಲಾಯಿತು.ಕರ್ನಾಟಕ ಸರ್ಕಾರ ಅಗಸ್ಟ್ ೧೯೯೭ ರಲ್ಲಿ, ಆಡಳಿತ ದೃಷ್ಟಿಯಿಂದ ಅವಿಭಜಿತ ದಕ್ಷಿಣ ಕನ್ನಡ ಜಿಲ್ಲೆಯನ್ನು ದಕ್ಷಿಣ ಕನ್ನಡ ಹಾಗೂ ಉಡುಪಿ ಜಿಲ್ಲೆಯಾಗಿ ವಿಂಗಡಿಸಿತು.

## ದಕ್ಷಿಣ ಕನ್ನಡ ಜಿಲ್ಲೆಯ ಚಾರಿತ್ರಿಕ ಹಿನ್ನಲೆ :

ಜನ ನಂಬುಗೆಯಂತೆ, ಅವಿಭಜಿತ ದಕ್ಷಿಣ ಕನ್ನಡ ಜಿಲ್ಲೆಯು ಪಶ್ಚಿಮ ಘಟ್ಟದಿಂದ ಕರಾವಳಿವರೆಗಿನ "ಪರಶುರಾಮ ಸೃಷ್ಟಿಯ ಭಾಗವಾಗಿದೆ. ಈ ನಂಬುಗೆಯಂತೆ, ಕ್ಷತ್ರಿಯರನ್ನು ಭೂಲೋಕದಿಂದ ನಿರ್ಮೂಲನೆ ಮಾಡುವ ಪ್ರತಿಜ್ಞೆ ಕೈಗೊಂಡ "ಪರಶುರಾಮನು ಭೂಮಿಯನ್ನು ೨೧ ಬಾರಿ ಸುತ್ತಿ ಸಕಲ ಕ್ಷತ್ರಿಯರನ್ನು ನಿರ್ಮೂಲನೆ ಮಾಡಿದ ನಂತರ ತಾನು ನೆಲೆಸಲು ಕ್ಷತ್ರಿಯರು ಕಾಲಿಡದ ಜಾಗವೊಂದನ್ನು ಸೃಷ್ಟಿಸಬಯಸುತ್ತಾನೆ. ಅದರಂತೆ ಪಶ್ಚಿಮ ಘಟ್ಟದ ಶಿಖರವೊಂದರ ಮೇಲೆ ನಿಂತು ರಕ್ತದಿಂದ ಮಲಿನವಾದ ತನ್ನ ಕೊಡಲಿಯನ್ನು (ಪರಶು) ಸಮುದ್ರದೆಡೆಗೆ ಎಸೆಯಲು ಸಮುದ್ರ ರಾಜನು ಕೊಡಲಿ ಬಿದ್ದಲ್ಲಿಯ ವರೆಗೆ ಹಿಂದೆ ಸರಿದು ಸೃಷ್ಟಿಯಾದ ಭೂಭಾಗವೇ ಈ "ಪರಶುರಾಮ ಸೃಷ್ಟಿ". ಬಹುಶ: ಪಶ್ಚಿಮ ಘಟ್ಟದ ಕೆಳಗಿನ ಭೂಭಾಗದಲ್ಲಿ ಈ ಜಿಲ್ಲೆ ಇರುವುದರಿಂದ ಈ ನಂಬಿಕೆಗೆ ಪುಷ್ಟಿ ಬಂದಿರಬಹುದು.

## ದಕ್ಷಿಣ ಕನ್ನಡ ಜಿಲ್ಲೆಯ ಜನಸಂಖ್ಯೆ :

ದಕ್ಷಿಣ ಕನ್ನಡ ಕರ್ನಾಟಕ ರಾಜ್ಯದ ಒಂದು ಕರಾವಳಿ ಜಿಲ್ಲೆಯಾಗಿದೆ. ಈ ಜಿಲ್ಲೆಯ ಕೇಂದ್ರ ಸ್ಥಳ ಹಾಗೂ ಮುಖ್ಯ ನಗರ ಮಂಗಳೂರು.ದಕ್ಷಿಣ ಕನ್ನಡ ಜಿಲ್ಲೆಯ ಜನಸಂಖ್ಯೆ ೨,೦೮೩,೬೨೫ (೨೦೧೧ ರ ಜಣಗಣತಿಯಂತೆ) ಇದು ೨೦೦೧ ರ ಜನಸಂಖ್ಯೆಗಿಂತ ಶೇ. ೯.೮೦ ರಷ್ಟು ಹೆಚ್ಚಾಗಿದೆ. ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಐದು ತಾಲೂಕುಗಳಿವೆ ಮಂಗಳೂರು, ಬಂಟ್ವಾಳ, ಪುತ್ತೂರು, ಸುಳ್ಯ ಹಾಗೂ ಬೆಳ್ತಂಗಡಿ.

**ಕೋಷ್ಟಕ ೩.೧ : ಜನಸಂಖ್ಯಾ ವಿವರ ೨೦೧೧ ರ ಜಣಗಣತಿಯ ಪ್ರಕಾರ**

| ಜಿಲ್ಲೆ | ಪ್ರದೇಶ | ಒಟ್ಟು | ಪುರುಷರು | ಮಹಿಳೆಯರು | ಶೇಕಡವಾರು |
|---|---|---|---|---|---|
| ೧ | ೨ | ೩ | ೪ | ೫ | ೬ |
| ದಕ್ಷಿಣ ಕನ್ನಡ | ಒಟ್ಟು | ೨,೦೮೩,೬೨೫ | ೧,೦೩೨,೫೭೭ | ೧,೦೫೧,೦೪೮ | |
| | ಗ್ರಾಮೀಣ | ೧,೦೯೧,೮೮೮ | ೫೪೧,೦೬೫ | ೫೫೦,೮೨೩ | ೫೨.೪೦ % |
| | ನಗರ | ೯೯೧,೭೩೭ | ೪೯೧,೫೧೨ | ೫೦೦,೨೨೫ | ೪೭.೬೦ % |

**ಕೋಷ್ಟಕ ೩.೨ : ಜನಸಂಖ್ಯಾ ವಿವರ ೨೦೦೧ ರ ಜಣಗಣತಿಯ ಪ್ರಕಾರ**

| ಜಿಲ್ಲೆ | ಪ್ರದೇಶ | ಒಟ್ಟು | ಪುರುಷರು | ಮಹಿಳೆಯರು | ಶೇಕಡವಾರು |
|---|---|---|---|---|---|
| ೧ | ೨ | ೩ | ೪ | ೫ | ೬ |
| ದಕ್ಷಿಣ ಕನ್ನಡ | ಒಟ್ಟು | ೧,೮೯೭,೭೩೦ | ೯೩೮,೪೩೪ | ೯೫೯,೨೯೬ | |
| | ಗ್ರಾಮೀಣ | ೧,೧೬೮,೪೨೮ | ೫೭೪,೬೫೭ | ೫೯೩,೭೭೧ | ೬೧.೫೭ % |
| | ನಗರ | ೭೨೯,೩೦೨ | ೩೬೩,೭೭೭ | ೩೬೫,೫೨೫ | ೩೮.೪೩ % |




**ರೇಖಾ ನಕ್ಷೆ ೩.೧**

೨೦೧೧ ರ ಜಣಗಣತಿಯ ಪ್ರಕಾರ ದಕ್ಷಿಣ ಕನ್ನಡ ಜಿಲ್ಲೆಯ ಒಟ್ಟು ಜನಸಂಖ್ಯೆ ೨,೦೮೩,೬೨೫ ಆಗಿದೆ.ಅದರಲ್ಲಿ ೧,೧೬೮,೪೨೮ರಷ್ಟು ಜನರು ಗ್ರಾಮೀಣ ಪ್ರದೇಶಗಳಲ್ಲಿ ವಾಸಿಸುತ್ತಾರೆ ಮತ್ತು ೯೯೧,೭೩೭ರಷ್ಟು ಜನರು ನಗರ ಪ್ರದೇಶಗಳಲ್ಲಿ ವಾಸಿಸುತ್ತಾರೆ.೨೦೦೧ ರ ಜಣಗಣತಿಯ ಪ್ರಕಾರ ದಕ್ಷಿಣ ಕನ್ನಡ ಜಿಲ್ಲೆಯ ಗ್ರಾಮೀಣ ಪ್ರದೇಶದ ಜನಸಂಖ್ಯೆಯು ಶೇ. ೬೧.೫೭ ಆಗಿದ್ದು ೨೦೧೧ ರಲ್ಲಿ ಶೇ. ೫೨.೪೦ ಆಗಿದೆ ಇದರಿಂದ ನಮಗೆ ತಿಳಿಯುವುದೇನೆಂದರೆ ದಕ್ಷಿಣ ಕನ್ನಡ ಜಿಲ್ಲೆಯ ಗ್ರಾಮೀಣ ಪ್ರದೇಶದ ಜನಸಂಖ್ಯೆಯು ಶೇ.೯.೧೭ರಷ್ಟು ಇಳಿಕೆಯಾಗಿದೆ.ಅದೇ ನಗರ ಪ್ರದೇಶಗಳಲ್ಲಿ ಶೇ.೯.೧೭ರಷ್ಟು ಹೆಚ್ಚಳವನ್ನು ಕಂಡಿದೆ.೨೦೦೧ ಮತ್ತು ೨೦೧೧ರ ಜಣಗಣತಿಯನ್ನು ಹೋಲಿಕೆ ಮಾಡಿ ನೋಡಿದರೆ ಶೇ.೯.೮೦ರಷ್ಟು ಜನಸಂಖ್ಯಾ ಹೆಚ್ಚಳವನ್ನು ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಕಾಣಬಹುದು.

ಕೆಲವು ವರ್ಷಗಳ ಹಿಂದೆ ಇನ್ನೂ ಮೂರು ತಾಲೂಕುಗಳು ದಕ್ಷಿಣ ಕನ್ನಡ ಜಿಲ್ಲೆಗೆ ಸೇರಿದ್ದವು: ಉಡುಪಿ, ಕುಂದಾಪುರ ಮತ್ತು ಕಾರ್ಕಳ. ಅಗಸ್ಟ್ ೧೯೯೭ ರಲ್ಲಿ ಈ ತಾಲೂಕುಗಳನ್ನು ಉಡುಪಿ ಜಿಲ್ಲೆಯ ಭಾಗವಾಗಿ ಘೋಷಿಸಲಾಯಿತು.ದಕ್ಷಿಣ ಕನ್ನಡ ಮತ್ತು ಉಡುಪಿ ಜಿಲ್ಲೆಗಳನ್ನು ತುಳುನಾಡು ಎಂದೂ ಕರೆಯಲಾಗುತ್ತದೆ. ತುಳು ಭಾಷೆ ಇಲ್ಲಿನ ಪ್ರಮುಖ ಭಾಷೆಯಾದ್ದರಿಂದ ಈ ಹೆಸರು ಬಂದಿದೆ.

## ದಕ್ಷಿಣಕನ್ನಡ ಜಿಲ್ಲೆಯ ಮುಖ್ಯ ಕಸುಬು ಮತ್ತು ಬೆಳೆಗಳು:

ಕರಾವಳಿ ಜಿಲ್ಲೆಗಳಾದ ದಕ್ಷಿಣ ಕನ್ನಡ, ಉತ್ತರ ಕನ್ನಡ, ಉಡುಪಿ ಜಿಲ್ಲೆಗಳು ೧೫೦ ಕಿಲೋ ಮೀಟರ್ ಕರಾವಳಿ ಪ್ರದೇಶವನ್ನು ಹೊಂದಿದೆ. ಇಲ್ಲಿನ ಮುಖ್ಯ ಕಸುಬು ಮೀನುಗಾರಿಕೆ. ಇಲ್ಲಿ ಆಳವಾದ ಮೀನುಗಾರಿಕೆಯನ್ನು ಮಾಡುತ್ತಾರೆ. ಭತ್ತ , ತೆಂಗು ಇಲ್ಲಿಯ ಮುಖ್ಯ ಬೆಳೆಗಳು.

**ದಕ್ಷಿಣಕನ್ನಡ ಜಿಲ್ಲೆಯ ಆಧುನಿಕ ಸಾಮಾಜಿಕ ಪರಿಚಯ:**

ಜಿಲ್ಲೆಗಳಲ್ಲಿಯೇ ದಕ್ಷಿಣಕನ್ನಡ ಜಿಲ್ಲೆಯು ಅತ್ಯಂತ ಅಭಿವೃದ್ಧಿ ಹೊಂದಿದ ಜಿಲ್ಲೆ .ಮಂಗಳೂರು ನಗರವು ಇಲ್ಲಿಯ ಜಿಲ್ಲಾ ಕೇಂದ್ರವಾಗಿದೆ. ಮಂಗಳೂರು ನಗರವು ತ್ವರಿತಗತಿಯಲ್ಲಿ ಅಭಿವೃದ್ಧಿ ಹೊಂದುತ್ತಿದೆ.ಬೆಂಗಳೂರಿನ ನಂತರ ಅಭಿವೃದ್ಧಿ ಹೊಂದುತ್ತಿರುವ ೨ನೇ ನಗರವೆಂದರೆ ಅದು ದಕ್ಷಿಣ ಕನ್ನಡ.ಇಲ್ಲಿ ಅಂತರಾಷ್ಟ್ರೀಯ ವಿಮಾನ ನಿಲ್ದಾಣವಿದೆ, ಪ್ರಮುಖ ಬಂದರು ಇದೆ. ಇಲ್ಲಿನ ಬಂದರನ್ನು ದೇಶದಲ್ಲೇ ೭ ನೇ ಪ್ರಮುಖ ಬಂದರು ಎಂದು ಪರಿಗಣಿಸಲಾಗಿದೆ. ಇಲ್ಲಿನ ರೈಲು ನಿಲ್ದಾಣವು ದೇಶದ ಪ್ರಮುಖ ನಿಲ್ದಾಣಗಳಲ್ಲಿ ಒಂದು.ದಕ್ಷಿಣ ಕನ್ನಡ ಜಿಲ್ಲೆಯನ್ನು ಬುದ್ಧಿವಂತರ ಜಿಲ್ಲೆಯೆಂದು ಕರೆಯುತ್ತಾರೆ.

ದಕ್ಷಿಣ ಕನ್ನಡ ಜಿಲ್ಲೆಯು ಶೈಕ್ಷಣಿಕವಾಗಿ, ಬ್ಯಾಂಕಿಂಗ್ ಕ್ಷೇತ್ರದಲ್ಲಿ, ಉದ್ಯೋಗ ಕ್ರಾಂತಿಯಲ್ಲಿ ಬಹಳ ಮುಂದುವರಿದಿದೆ. ದಕ್ಷಿಣ ಕನ್ನಡ ಜಿಲ್ಲೆಯು ನೈಸರ್ಗಿಕವಾಗಿ ನೋಡಲು ಸುಂದರವಾಗಿದೆ. ಇಲ್ಲಿನ ಪ್ರಕೃತಿ ಸೌಂದರ್ಯವನ್ನು ನೋಡಲು ದೇಶ ವಿದೇಶಗಳಿಂದ ಪ್ರವಾಸಿಗರು ಬರುತ್ತಾರೆ. ಇಲ್ಲಿಯ ರಮಣೀಯವಾದಂತ ಬೆಟ್ಟಗುಡ್ಡಗಳು , ಬಯಲು ಸೀಮೆಗಳು, ನಿತ್ಯಹರಿದ್ವರ್ಣದ ಕಾಡುಗಳು , ಸಂಜೆಯೆ ಹೊತ್ತಿಗೆ ಕಡಲ ತೀರದಲ್ಲಿ ಸೂರ್ಯನು ಸಮುದ್ರವನ್ನು ತನ್ನ ಅಂತರಂಗದಲ್ಲಿ ಅದುಮಿಟ್ಟಾಗೆ ಪ್ರವಾಸಿಗರಿಗೆ ಗೋಚರಿಸಲ್ಪಡುತ್ತದೆ.

ದಕ್ಷಿಣ ಕನ್ನಡ ಜಿಲ್ಲೆಯು ಮುಖ್ಯವಾಗಿ ಶೈಕ್ಷಣಿಕವಾಗಿ ಬಹಳ ಮುಂದುವರಿದಿದೆ. ಇಲ್ಲಿ ಅತ್ಯಂತ ಉತ್ತಮ ಗುಣಮಟ್ಟದ ಶಿಕ್ಷಣವನ್ನು ನೀಡಲಾಗುತ್ತದೆ, ವೈದ್ಯಕೀಯ, ದಂತ, ನರ್ಸಿಂಗ್ , ಬಿ.ಪಿ.ಟಿ, ಇಂಜಿನಿಯರಿಂಗ್, ಎಂ.ಬಿ.ಎ, ಮುಂತಾದ ಕೋರ್ಸ್‌ಗಳು ಇಲ್ಲಿ ಲಭ್ಯವಿದೆ. ಅತೀ ಕಡಿಮೆ ವೆಚ್ಚದಲ್ಲಿ ಶಿಕ್ಷಣವನ್ನು ನೀಡಲಾಗುತ್ತಿದೆ

**ದಕ್ಷಿಣಕನ್ನಡ ಜಿಲ್ಲೆಯ ಪ್ರಮುಖ ಭಾಷೆಗಳು :**

ತುಳು ದಕ್ಷಿಣ ಕನ್ನಡ ಜಿಲ್ಲೆಯ ಪ್ರಮುಖ ಭಾಷೆಯಾಗಿದೆ. ಅದಲ್ಲದೆ ಕನ್ನಡ, ಹವ್ಯಕ ಕನ್ನಡ, ಕುಂದಾಪುರ ಕನ್ನಡ, ಅರೆಭಾಷೆ ಕನ್ನಡ, ಕೊಂಕಣಿ, ಗೋವಾ ಕೊಂಕಣಿ, ಉರ್ದು, ಬ್ಯಾರಿ ಮತ್ತು ಮರಾಠೀ ಇಲ್ಲಿನ ಇತರೆ ಪ್ರಮುಖ ಭಾಷೆಗಳಾಗಿವೆ.

## ೩.೩ ದಕ್ಷಿಣಕನ್ನಡ ಜಿಲ್ಲೆಯ ಸರ್ಕಾರೇತರ ಸಂಸ್ಥೆಗಳ ವಿಶ್ಲೇಷಣೆ :

ಸರ್ಕಾರೇತರ ಸಂಸ್ಥೆಗಳು ಗ್ರಾಮೀಣ ಅಭಿವೃದ್ಧಿಯಲ್ಲಿ ಪ್ರಮುಖ ಪಾತ್ರವಹಿಸುತ್ತವೆ. ಪ್ರಸ್ತುತ ಅಧ್ಯಯನವಾದ ಗ್ರಾಮೀಣಾಭಿವೃದ್ಧಿಯಲ್ಲಿ ಸರ್ಕಾರೇತರ ಸಂಸ್ಥೆಗಳ ಪಾತ್ರ ಈ ಅಧ್ಯಯನವನ್ನು ದಕ್ಷಿಣ ಕನ್ನಡದ ಕೆಲವು ಗ್ರಾಮೀಣ ಪ್ರದೇಶಗಳಲ್ಲಿ ನಡೆಸಲಾಗಿದೆ. ದಕ್ಷಿಣ ಕನ್ನಡದಲ್ಲಿರುವ ಸರ್ಕಾರೇತರ ಸಂಸ್ಥೆಗಳು ವಿವಿಧ ಕಾರ್ಯ ಕ್ಷೇತ್ರಗಳಲ್ಲಿ ತಮ್ಮನ್ನು ತಾವು ತೊಡಗಿಸಿಕೊಂಡಿವೆ. ಈ ಸರ್ಕಾರೇತರ ಸಂಸ್ಥೆಗಳು ಕೇವಲ ಅಭಿವೃದ್ಧಿ ಪೂರಕವಾಗಿರದೆ ವಿವಿಧ ಧ್ಯೇಯೊದ್ದೇಶಗಳನ್ನು ಹೊಂದಿವೆ. ಸರ್ಕಾರೇತರ ಸಂಸ್ಥೆಗಳು ಅಂಗವಿಕಲರ ಮತ್ತು ವಯೋವೃದ್ಧರ ಅಭಿವೃದ್ಧಿ, ಮದ್ಯಪಾನ ವಿರೋಧಿ ಚಟುವಟಿಕೆಗಳು, ಕೃಷಿ ಮತ್ತು ಶೈಕ್ಷಣಿಕ ಅಭಿವೃದ್ಧಿ, ಪರಿಸರ ಸಂರಕ್ಷಣೆ ಮತ್ತು ಆರೋಗ್ಯ, ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡಗಳ ಅಭಿವೃದ್ಧಿ, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಈ ರೀತಿಯ ವಿವಿಧ ಸಂಸ್ಥೆಗಳನ್ನು ಸ್ಥಾಪಿಸಿ ಗ್ರಾಮೀಣಾಭಿವೃದ್ಧಿಯನ್ನು ಸಾಧಿಸುತ್ತಿವೆ

**ದಕ್ಷಿಣ ಕನ್ನಡದ ವಿವಿಧ ವಲಯಗಳ ಸರ್ಕಾರೇತರ ಸಂಸ್ಥೆಗಳ ವಿವರಗಳು ಈ ಕೆಳಕಂಡಂತಿವೆ:**

**ಕೋಷ್ಟಕ ೩.೩: ವಯೋವೃದ್ಧರು ಮತ್ತು ಭಿನ್ನ ಸಾಮರ್ಥ್ಯರ ಅಭಿವೃದ್ಧಿಗೆ ಸಂಬಂಧಿಸಿದ ಸರ್ಕಾರೇತರ ಸಂಸ್ಥೆಗಳು:**

| ಕ್ರ.ಸ | ಸಂಸ್ಥೆಯ ಹೆಸರು | ಸ್ಥಾಪನೆ | ವಿಳಾಸ | ಚಟುವಟಿಕೆಗಳು |
|---|---|---|---|---|
| ೧ | ಅಭಯ ಆಶ್ರಯ | ೧೯೭೧ | ಅಸೈಗೋಳಿ, ಕೊಣಾಜೆ ಮಂಗಳೂರು -೫೭೪೧೯೯ ದೂರವಾಣಿ:(೦೮೨೪)೭೪೨೨೩೬ | ಲಯನ್ಸ್ ಕ್ಲಬ್ ಮತ್ತು ರೋಟರೀ ಕ್ಲಬ್‌ನ ಸಹಯೋಗದೊಂದಿಗೆ ವಯೋವೃದ್ಧರು ಮತ್ತು ಮಕ್ಕಳ ಅಭಿವೃದ್ಧಿ ಮಾಡುವುದು. |
| ೨ | ಆಶಾ ಜ್ಯೋತಿ | | ಸೇವಾ ಭಾರತೀ ಟ್ರಸ್ಟ್ ಬಾಲ ಮಾರುತಿ ವ್ಯಾಯಾಮ ಶಾಲೆ, ವಿ ಟಿ ರೋಡ್, ಮಂಗಳೂರು -೫೭೫೦೦೧ ದೂರವಾಣಿ:೨೪೯೩೩೯೭ | ಹದಿನೈದು ವರ್ಷಕ್ಕಿಂತ ಮೇಲ್ಪಟ್ಟ ಅಂಗವಿಕಲ ಮಕ್ಕಳಿಗೆ ವಿಶೇಷ ತರಬೇತಿಗಳನ್ನು ಒದಗಿಸುವುದು. |

| ಕ್ರ.ಸ | ಸಂಸ್ಥೆಯ ಹೆಸರು | ಸ್ಥಾಪನೆ | ವಿಳಾಸ | ಚಟುವಟಿಕೆಗಳು |
|---|---|---|---|---|
| ೩ | ಭಾಂಧವ್ಯ | ಸೆಪ್ಟಂಬರ್ ೨೩ ೨೦೦೫ | ಡೋರ್ ನಂ. ೩ಇ೯-೭೩೮/೨. ಸಿಒಡಿಪಿ. ಕದ್ರಿ ಗುಡ್ಡ. ಬಿಜೈ ಪೋಸ್ಟ್ ಮಂಗಳೂರು೫೭೫೦೦೪ ದೂರವಾಣಿ:(೦೮೨೪)೨೨೨೧೫೮೦ - ೨೨೧೭೩೪೧ | ಗ್ರಾಮೀಣ ಮತ್ತು ನಗರ ಪ್ರದೇಶದಲ್ಲಿರುವ ಭಿನ್ನ ಸಾಮರ್ಥ್ಯರ ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿಗೆ ತರಬೇತಿಗಳನ್ನು ಕೈಗೊಳ್ಳುವುದು. |
| ೪ | ಚೇತನ | ೧೯೯೨ | ಸೇವಾ ಭಾರತೀ ಟ್ರಸ್ಟ್ ಬಾಲ ಮಾರುತಿ ವ್ಯಾಯಾಮ ಶಾಲೆ. ವಿ ಟಿ ರೋಡ್, ಮಂಗಳೂರು -೫೭೫೦೦೧ ದೂರವಾಣಿ:೨೪೯೩೩೯೭ | ಮಾನಸಿಕವಾಗಿ ಮತ್ತು ಶಾರೀರಿಕವಾಗಿ ಅಂಗವೈಕಲ್ಯದಿಂದ ಬಳಲುತ್ತಿರುವವರಿಗೆ ಸಹಾಯಹಸ್ತವನ್ನು ಒದಗಿಸುವುದು. |

**ಕೋಷ್ಟಕ ೩.೪ ಮಧ್ಯಪಾನ ವಿರೋಧಿ ಚಟುವಟಿಕೆಗಳಿಗೆ ಸಂಬಂಧಿಸಿದ ಸರ್ಕಾರೇತರ ಸಂಸ್ಥೆಗಳು :**

| ಕ್ರ.ಸ | ಸಂಸ್ಥೆಯ ಹೆಸರು | ಸ್ಥಾಪನೆ | ವಿಳಾಸ | ಚಟುವಟಿಕೆಗಳು |
|---|---|---|---|---|
| ೧ | ಕೃಪಾ ಫೌಂಡೇಶನ್ | ಅಗಸ್ಟ್ ೧೫ ೧೯೮೧ | ಸ್ಯೆಂಟ್ ಮಾತಿಯಾಸ್ ರೋಡ್. ಪಾಂಡೇಶ್ವರ ಪೋಸ್ಟ್, ಫಳ್ನೀರ್ ಮಂಗಳೂರು -೫೭೫೦೦೧ ದೂರವಾಣಿ:೨೪೪೮೯೪೨ | ಮಧ್ಯಪಾನ ವ್ಯಸನಿಗಳಿಗೆ ಉತ್ತಮವಾದ ಸಲಹೆ ಸೂಚನೆಗಳನ್ನು ನೀಡಿ ಮಧ್ಯಪಾನದ ಚಟವನ್ನು ಬಿಡಿಸುವಂತಹ ಒಂದು ಸಂಸ್ಥೆಯಾಗಿದೆ. |
| ೨ | ಲಿಂಕ್ ಕೌನ್ಸ್‌ಲಿಂಗ್ ಎಂಡ್ ಡಿ.ಎಡಿಕ್ಷನ್ ಸೆಂಟರ್ | ಅಗಸ್ಟ್ ೨೫ ೧೯೯೧ | ಜನತಾ ಕೇಂದ್ರ, ಮಂಗಳಾದೇವಿ ದೇವಸ್ಥಾನದ ಹಿಂಬದಿ, ವಿಠ್ಠಲ್ ರಾವ್ ರೋಡ್, ಬೋಳಾರ್ ಮಂಗಳೂರು -೫೭೫೦೦೧ ದೂರವಾಣಿ: ೨೪೨೩೮೯೦ | ಮಧ್ಯಪಾನ ವ್ಯಸನಿಗಳಿಗೆ ಉತ್ತಮವಾದ ಸಲಹೆ ಸೂಚನೆಗಳನ್ನು ನೀಡಿ ಮಧ್ಯಪಾನದ ಚಟವನ್ನು ಬಿಡಿಸುವಂತಹ ಒಂದು ಸಂಸ್ಥೆಯಾಗಿದೆ. |

**ಕೋಷ್ಟಕ ೩.೫ ಕೃಷಿ ಮತ್ತು ಶೈಕ್ಷಣಿಕ ಅಭಿವೃದ್ಧಿಗೆ ಸಂಬಂಧಿಸಿದ ಸರ್ಕಾರೇತರ ಸಂಸ್ಥೆಗಳು:**

| ಕ್ರ .ಸ | ಸಂಸ್ಥೆಯ ಹೆಸರು | ಸ್ಥಾಪನೆ | ವಿಳಾಸ | ಚಟುವಟಿಕೆಗಳು |
|---|---|---|---|---|
| ೧ | ಜೀವನ್‌ಧಾರಾ ಸಾಮಾಜಿಕ ಸೇವಾ ಸಂಸ್ಥೆ | ಸೆಪ್ಟಂಬರ್ ೨೮ ೧೯೯೮ | ಸೈಂಟ್ ರೈಮಂಡ್ಸ್ ಕಾನ್ವೆಂಟ್, ವಾಮಂಜೂರು ಪೋಸ್ಟ್, ಮಂಗಳೂರು -೫೭೫ ೦೦೮ ದೂರವಾಣಿ: ೨೨೩೨೧೦೫ | ಮಹಿಳೆಯರ ಸಾಮಾಜಿಕ ಮತ್ತು ಆರ್ಥಿಕ ಅಭಿವೃದ್ಧಿ |
| ೨ | ಶ್ರೀ ಧರ್ಮಸ್ಥಳ ಗ್ರಾಮೀಣ ಅಭಿವೃದ್ಧಿ ಯೋಜನೆ | ಮೇ ೧೮ ೨೦೦೨ | ಪುತ್ತೂರು | ಸ್ವ-ಸಹಾಯ ಸಂಘಗಳನ್ನು ಸ್ಥಾಪಿಸುವುದು ಮತ್ತು ಮೈರಾಡ ಸಂಸ್ಥೆಯ ಸಹಯೋಗದೊಂದಿಗೆ ಗ್ರಾಮೀಣ ಅಭಿವೃದ್ಧಿಯನ್ನು ಸಾಧಿಸುವುದು. |
| ೩ | ಮಂಗಳಜ್ಯೋತಿ ಇಂಟೆಗ್ರೇಟೆಡ್ ಸ್ಕೂಲ್ | | ವಾಮಂಜೂರು ಮಂಗಳೂರು-೫೭೫ ೦೦೮ ದೂರವಾಣಿ: ೭೩೨೦೩೦ | ಭಿನ್ನ ಸಾಮರ್ಥ್ಯ ಹೊಂದಿರುವ ಮಕ್ಕಳಿಗೆ ಉತ್ತಮ ಮಕ್ಕಳ ಜೊತೆಯಲ್ಲಿ ಸೇರಿ ತರಬೇತಿ ಮತ್ತು ಶಿಕ್ಷಣವನ್ನು ಒದಗಿಸುವುದು. |
| ೪ | ಪ್ರಜ್ಞಾ ಕೌನ್ಸಲಿಂಗ್ ಸೆಂಟರ್ | ೧೯೮೨ | ಫಳ್ನೀರ್ ರೋಡ್, ಕಂಕನಾಡಿ ಮಂಗಳೂರು -೫೭೫೦೦೨ ದೂರವಾಣಿ: ೨೪೩೩೮೨ | ವೈದ್ಯಕೀಯ ಮತ್ತು ಕುಟುಂಬ ಸಲಹೆಗಳನ್ನು ನೀಡುವುದು. ಮದ್ಯಪಾನದ ಚಟವನ್ನು ಬಿಡಿಸುವುದು ಮತ್ತು ಸ್ವ ಉದ್ಯೋಗಗಳನ್ನು ಪ್ರಾರಂಬಿಸಲು ಮಾರ್ಗದರ್ಶನವನ್ನು ನೀಡುವುದು. |

| ಕ್ರ .ಸ | ಸಂಸ್ಥೆಯ ಹೆಸರು | ಸ್ಥಾಪನೆ | ವಿಳಾಸ | ಚಟುವಟಿಕೆಗಳು |
|---|---|---|---|---|
| ೫ | ರಾಣಿ ಅಬ್ಬಕ್ಕ ತುಳು ಅಧ್ಯಯನ ಕೇಂದ್ರ | ಜನವರಿ ೨೧ ೧೯೯೫ | ಬಂಟ್ವಾಳ ದಕ್ಷಿಣಕನ್ನಡ-೫೭೪೨೧೯ | ಪ್ರಸಾರಾಂಗ ಮತ್ತು ಸಂಶೋಧನೆಯ ಚಟುವಟಿಕೆಗಳನ್ನು ಒಳಗೊಂಡಿದೆ. |
| ೬ | ಪ್ರಸಾದ್ ಅಧ್ಯಯನ ಸಮೂಹ ಮತ್ತು ಸೇವಾ ಸಂಸ್ಥೆ (ಪಾಸ್ ಗ್ರೂಪ್) | – | ಗುರುಪುರ ಮಂಗಳೂರು- ೫೭ ೪ ೧೪೫ | ಅಧ್ಯಯನ ಮತ್ತು ಸಂಶೋಧನೆಯ ಚಟುವಟಿಕೆಗಳನ್ನು ಒಳಗೊಂಡಿದೆ. |
| ೭ | ಋಷಿ ಸಂಸ್ಕೃತಿ ವಿಧ್ಯಾ ಕೇಂದ್ರ | – | ಕರ್ನಾಟಕ ಬ್ಯಾಂಕ್ ಬಿಲ್ಡಿಂಗ್‌ನ ಎದುರುಗಡೆ, ರಾ ಹೆ.೧೬ ಪಂಪ್‌ವೆಲ್, ಮಂಗಳೂರು-೫೭೫೦೦೨ ದೂರವಾಣಿ: ೯೩೪೩೩೩೫೧೪೦೦ | ಅಧ್ಯಯನ ಮತ್ತು ಸಂಶೋಧನೆಯ ಚಟುವಟಿಕೆಗಳನ್ನು ಒಳಗೊಂಡಿದೆ. |

**ಕೋಷ್ಟಕ ೩.೬ ಪರಿಸರ ಸಂರಕ್ಷಣೆ ಮತ್ತು ಆರೋಗ್ಯ ಅಭಿವೃದ್ಧಿಗೆ ಸಂಬಂಧಿಸಿದ ಸರ್ಕಾರೇತರ ಸಂಸ್ಥೆಗಳು:**

| ಕ್ರ .ಸ | ಸಂಸ್ಥೆಯ ಹೆಸರು | ಸ್ಥಾಪನೆ | ವಿಳಾಸ | ಚಟುವಟಿಕೆಗಳು |
|---|---|---|---|---|
| ೧ | ಮಂಗಳೂರು ತಾಲೂಕು ಗ್ರಾಮಾಂತರ ಪರಿಸರಾಸಕ್ತರ ಒಕ್ಕೂಟ. | ೧೯೯೧ | ಸೈಂಟ್ ಜೋಸೆಪ್ಸ್ ಹೈಲಾಂಡ್, ಬೆಂದೂರ್‌ವೆಲ್, ಮಂಗಳೂರು-೫೭೫೦೦೨ ದೂರವಾಣಿ: ೨೪೦೭೮೭೭ | ಪರಿಸರ ಸಂರಕ್ಷಣೆಯ ಬಗ್ಗೆ ಜನ ಜಾಗೃತಿಯನ್ನು ಮೂಡಿಸುವುದು. |
| ೨ | ಮಂಗಳೂರು ನಗರ ಪರಿಸರಾಸಕ್ತರ ಒಕ್ಕೂಟ. | ೧೯೯೪ | ಸೈಂಟ್ ಜೋಸೆಪ್ಸ್ ಹೈಲಾಂಡ್, ಬೆಂದೂರ್‌ವೆಲ್, ಮಂಗಳೂರು-೫೭೫೦೦೨ ದೂರವಾಣಿ: ೨೪೦೭೮೭೭ | ದಕ್ಷಿಣಕನ್ನಡ ಪರಿಸರಾಸಕ್ತರ ಒಕ್ಕೂಟ ಮತ್ತು ಸರ್ಕಾರೇತರ ಸಂಸ್ಥೆಗಳ ಸಹಯೋಗದಿಂದ ಕೃಷಿಕರು, ಬೆಸ್ತರು ಮತ್ತು ಮಹಿಳೆಯರ ಅಭಿವೃದ್ಧಿಯನ್ನು ಸಾದಿಸುತ್ತಿದೆ |

| ಕ್ರ .ಸ | ಸಂಸ್ಥೆಯ ಹೆಸರು | ಸ್ಥಾಪನೆ | ವಿಳಾಸ | ಚಟುವಟಿಕೆಗಳು |
|---|---|---|---|---|
| ೩ | ನಾಗರಿಕ ಸೇವಾ ಸಮಿತಿ | ೧೯೭೩ | ಗುರುವಾಯನಕೆರೆ, ಬಸ್ ಸ್ಟಾಂಡ್‌ನ ಹತ್ತಿರ, ಬೆಳ್ತಂಗಡಿ ಮಂಗಳೂರು-೫೭೪ ೨೧೭ ದೂರವಾಣಿ: (೦೮೨೫೬)೩೦೨೦೧೯ | |
| ೪ | ನೈರ್ಮಲ್ಯ ಸಮಿತಿ | | ವೆಂಕಪ್ಪ ಗಾರ್ಡನ್, ಕದ್ರಿ ಮಂಗಳೂರು- ೫೭೫೦೦೨ ದೂರವಾಣಿ: ೨೪೪೩೩೬೨ | |
| ೫ | ಮಹಿಳಾ ಸಮಿತಿ | | ವೆಂಕಪ್ಪ ಗಾರ್ಡನ್, ಕದ್ರಿ ಮಂಗಳೂರು- ೫೭೫೦೦೨ ದೂರವಾಣಿ: ೨೨೧೩೩೫೬ | |
| ೬ | ನಗರ ಚಿಂತನಾ ಸಮೂಹ | | ಕುಲನಂದನಾ, ಬೆಂದೂರ್‌ವೆಲ್, ಮಂಗಳೂರು-೫೭೫೦೦೨ ದೂರವಾಣಿ: ೨೪೨೮೬೮೧ | |
| ೭ | ಪ್ಲಾಸ್ಟಿಕ್ ಹೆಕ್ಕಿಕೊ ಆಂದೋಲನ | | ರೋಶನಿ ನಿಲಯ, ಕಂಕನಾಡಿ ಮಂಗಳೂರು-೫೭೫೦೦೨ ದೂರವಾಣಿ: ೨೪೩೫೭೯೧ | |
| ೮ | ನೇತ್ರಾವತಿ ನದಿ ಪರಿಸರ ಜಲಚರ ಸಂರಕ್ಷಣಾ ಅಧ್ಯಯನ ಕೇಂದ್ರ | ಜನವರಿ ೧ ೨೦೦೨ | ಬಂಟ್ವಾಳ ದಕ್ಷಿಣಕನ್ನಡ | ಜಲಚರಗಳು ಮತ್ತು ನದಿ ಸಂಪನ್ಮೂಲಗಳ ಸಂರಕ್ಷಣೆಯ ಬಗ್ಗೆ ಜನಜಾಗೃತಿಯನ್ನು ಮೂಡಿಸುವುದು. |
| ೯ | ಎ. ಜೆ ಆಸ್ಪತ್ರೆ | | ಕುಂಟಿಕಾನ, ಕದ್ರಿಯ ಹತ್ತಿರ ಮಂಗಳೂರು-೫೭೫೦೦೪ ದೂರವಾಣಿ: ೨೨೨೫೫೨೨ | ಹೆಚ್.ಐ.ವಿ ಯ ಬಗ್ಗೆ ಜನಜಾಗೃತಿಯನ್ನು ಮೂಡಿಸುವುದು. ಹೆಚ್.ಐ.ವಿ ಸೋಂಕಿತ ತಾಯಿಯಿಂದ ಮಗುವಿಗೆ ಹೆಚ್.ಐ.ವಿ ಹರಡದಂತೆ ತಡೆಗಟ್ಟುವುದು. |

| ಕ್ರ .ಸ | ಸಂಸ್ಥೆಯ ಹೆಸರು | ಸ್ಥಾಪನೆ | ವಿಳಾಸ | ಚಟುವಟಿಕೆಗಳು |
|---|---|---|---|---|
| ೧೦ | ಸಮುದಾಯ ಆರೋಗ್ಯ ಕೇಂದ್ರ | | ಕಾರ್ನಾಡ್, ಮುಲ್ಕಿ, ಮಂಗಳೂರು ದೂರವಾಣಿ: ೨೨೯೦೫೭೨ | ಆರೋಗ್ಯ ಸಂರಕ್ಷಣೆಯ ಬಗ್ಗೆ ಸ್ವ ಸಹಾಯ ಗುಂಪುಗಳು ಮತ್ತು ವಿವಿಧ ಸಮೂದಾಯಗಳ ಸಹಯೋಗದಿಂದ ಜನಜಾಗೃತಿಯನ್ನು ಮೂಡಿಸುವುದು. |
| ೧೧ | ಜೀವನ್‌ದಾನ್ | ಫೆಬ್ರವರಿ ೨ ೨೦೦೪ | ಹೆಚ್.ಐ.ವಿ/ ಏಡ್ಸ್ ಸೆಂಟರ್, ಕೈಕಂಬ, ಕಿನ್ನಿಕಂಬ್ಳ ಪೋಸ್ಟ್, ಮಂಗಳೂರು-೫೭೪ ೧೫೧ ದೂರವಾಣಿ:(೦೮೨೪)೨೨೫೮೮೯ | ವಿವಿಧ ಕಾರ್ಯಕ್ರಮಗಳ ಮೂಲಕ ಹೆಚ್.ಐ.ವಿ ಯ ಬಗ್ಗೆ ಜನಜಾಗೃತಿಯನ್ನು ಮೂಡಿಸುವುದು. ಹೆಚ್.ಐ.ವಿ ಸೋಂಕಿತ ರೋಗಿಗಳಿಗೆ ಉತ್ತಮ ಶುಶ್ರೂಷೆಯನ್ನು ಒದಗಿಸುವುದು. |
| ೧೨ | ಸೇವಾಂಜಲಿ ಪ್ರತಿಷ್ಠಾನ | ೧೯೮೩ | ಫರಂಗಿಪೇಟೆ, ಬಂಟ್ವಾಳ ದಕ್ಷಿಣಕನ್ನಡ | ಬಡಜನರ ಅಭಿವೃದ್ಧಿಗೆ ವಿವಿಧ ರೀತಿಯ ಚಟುವಟಿಕೆಗಳನ್ನು ಹಮ್ಮಿಕೊಂಡಿವೆ. ಬಡಜನರಿಗೆ ಉಚಿತ ಆರೋಗ್ಯ ತಪಾಸಣೆ ಮತ್ತು ನೇತ್ರದಾನ ಶಿಬಿರಗಳನ್ನು ನಡೆಸುತ್ತದೆ. |
| ೧೩ | ವಂದನಾ ಪಬ್ಲಿಕ್ ವೆಲ್‌ಫೇರ್ ಎಸೋಸಿಯೇಶನ್ | ೧೯೯೦ | ಡೋರ್ ನಂ. ೧೭-೩-೩೨೩, ಶಾಂತಿ ಕೇಂದ್ರ , ಎರಡನೇ ಮಹಡಿ, ಕಂಕನಾಡಿ ಮಂಗಳೂರು-೫೭೫೦೦೨ | ಮಹಿಳೆಯರಿಗೆ ಮತ್ತು ನಿರುದ್ಯೋಗ ಯುವಕರಿಗೆ ಸ್ವ ಉದ್ಯೋಗಗಳ ತರಬೇತಿಯನ್ನು ನೀಡಲಾಗುತ್ತದೆ. |

**ಕೋಷ್ಟಕ ೩.೭ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡಗಳ ಅಭಿವೃದ್ಧಿಗೆ ಸಂಬಂಧಿಸಿದ ಸರ್ಕಾರೇತರ ಸಂಸ್ಥೆಗಳು:**

| ಕ್ರ .ಸ | ಸಂಸ್ಥೆಯ ಹೆಸರು | ಸ್ಥಾಪನೆ | ವಿಳಾಸ | ಚಟುವಟಿಕೆಗಳು |
|---|---|---|---|---|
| ೧ | ಜನ ಶಿಕ್ಷಣಾ ಸಮಿತಿ | ೧೯೮೮ | ಫೀಲ್ಡ್ ವ್ಯಿವ್, ಸಿ. ಡಿಸಿಲ್ವಾ ಕಂಪೌಂಡ್, ಪಂಪ್‌ವೆಲ್ ಎದುರುಗಡೆ, ಮಂಗಳೂರು-೫೭೫೦೦೨ ದೂರವಾಣಿ: ೨೪೩೨೦೮೯ | ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡಗಳ ಜನರಿಗೆ ಸ್ವ ಸಹಾಯ ಗುಂಪುಗಳು ಮೂಲಕ ವೈಧ್ಯಕೀಯ ಮತ್ತು ಶೈಕ್ಷಣಿಕ ಸವಲತ್ತುಗಳನ್ನು ಒದಗಿಸುವುದು. |
| ೨ | ಸ್ವಯಂ ಸೇವಾ ಯುವ ಘಟಕ | ೧೯೯೫ | ನೂಜ್ಜಿಲ, ಸುಬ್ರಮಣ್ಯ ಪೋಸ್ಟ್, ಸುಳ್ಯ, ದಕ್ಷಿಣಕನ್ನಡ-೫೭೪೨೩೮ | ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡಗಳ ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿಯನ್ನು ಸಾದಿಸುವುದು. |
| ೩ | ಮಹಿಳಾ ಗ್ರಾಹಕರ ಸಹಕಾರ ಸಂಘ | ೧೯೭೭ | ಬೆಳ್ತಂಗಡಿ, ದಕ್ಷಿಣಕನ್ನಡ | ಮಹಿಳಾ ಮತ್ತು ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡಗಳ ಗ್ರಾಹಕ ಸಮಸ್ಯೆಗಳನ್ನು ಬಗೆಹರಿಸುವುದು ಮತ್ತು ಅಲ್ಪ ಪ್ರಮಾಣದ ಸಾಲ ಸೌಲಭ್ಯಗಳನ್ನು ಒದಗಿಸುವುದು. |
| ೪ | ದಲಿತ ಸಂಘರ್ಷ ಸಮಿತಿ | | ಸ್ಟೋನ್ ಲ್ಯಾಂಡ್ ಟವರ್, ಕರ್ನಾಟಕ ಬ್ಯಾಂಕ್ ಬಿಲ್ಡಿಂಗ್ ಸರ್ವಿಸ್ ಬಸ್ ಸ್ಟಾಂಡಿನ ಹತ್ತಿರ, ಮಂಗಳೂರು-೫೭೫ ೦೦೧ | ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡಗಳ ಅಭಿವೃದ್ಧಿಯನ್ನು ಸಾದಿಸುವುದು. |

**ಕೋಷ್ಟಕ ೩.೮ ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿಗೆ ಸಂಬಂಧಿಸಿದ ಸರ್ಕಾರೇತರ ಸಂಸ್ಥೆಗಳು:**

| ಕ್ರ .ಸ | ಸಂಸ್ಥೆಯ ಹೆಸರು | ಸ್ಥಾಪನೆ | ವಿಳಾಸ | ಚಟುವಟಿಕೆಗಳು |
|---|---|---|---|---|
| ೧ | ಆದರ್ಶ್ | ಒಕ್ಟೋಬರ್ ೨೭ ೧೯೯೯ | ಅಲಂಗಾರ್, ಪೋಸ್ಟ್ ಬಾಕ್ಸ್ ನಂ. ೨೨ ಮೂಡಬಿದ್ರಿ, ಮಂಗಳೂರು -೫೭೪ ೨೨೭ | ಮಹಿಳೆಯರು ಮತ್ತು ಬಡಜನರಿಗೆ ಗ್ರಾಮೀಣ ಸ್ವ ಸಹಾಯ ಗುಂಪುಗಳು ಮೂಲಕ ಸಹಾಯಹಸ್ತವನ್ನು ಒದಗಿಸುವುದು. |
| ೨ | ಅಕ್ಷ | | ಗಣಪತಿ ಕೃಪಾ ಹೌಸ್, ಜಾರದಬೆಟ್ಟು, ವಾಮಂಜೂರು, ಮಂಗಳೂರು-೫೭೫೦೦೮ ದೂರವಾಣಿ: ೯೮೮೦೩೨೮೩೮೨ | ಮಕ್ಕಳ ಹಕ್ಕುಗಳ ಬಗ್ಗೆ ಜನಜಾಗೃತಿಯನ್ನು ಮೂಡಿಸುವುದು. |
| ೩ | ಧರ್ಮ ಜ್ಯೋತಿ ಸಾಮಾಜಿಕ ಕೇಂದ್ರ | ೧೯೮೧ | ವಾಮಂಜೂರು, ಮಂಗಳೂರು-೫೭೫ ೦೦೮ ದೂರವಾಣಿ: ೨೨೬೩೩೨೭ | ಮಂಗಳೂರಿನ ಸರ್ಕಾರೇತರ ಸಂಸ್ಥೆಗಳಾದ ಪರಿಸರಾಸಕ್ತರ ಒಕ್ಕೂಟ ಮತ್ತು ಸ್ವ ಸಹಾಯ ಗುಂಪುಗಳ ಸಹಯೋಗದೊಂದಿಗೆ ಮಹಿಳೆ,ಮಕ್ಕಳ ಮತ್ತು ಯುವ ಜನರಿಗೆ ಸಲಹೆ ಸೂಚನೆಗಳನ್ನು ನೀಡಿ ಅಭಿವೃದ್ಧಿಯನ್ನು ಸಾಧಿಸುತ್ತಿದೆ. |
| ೪ | ದಕ್ಷಿಣಕನ್ನಡ ಹಾಲು ಉತ್ಪಾದಕರ ಒಕ್ಕೂಟ | ೧೯೮೬ | ಕುಲಶೇಕರ, ಮಂಗಳೂರು-೫೭೫ ೦೦೫ | ಕೆ.ಎಂ.ಎಫ್ ಮತ್ತು ಎನ್.ಡಿ.ಡಿ.ಬಿ ಗುಜರಾತ್ ನ ಸಹಯೋಗದೊಂದಿಗೆ ಗ್ರಾಮೀಣ ಕೃಷಿಕರಿಗೆ ಮತ್ತು ಮಹಿಳೆಯರಿಗೆ ಹಾಲು ಉತ್ಪಾದನೆ ಮತ್ತು ಪಶು ಸಂಗೋಪನೆಯ ಬಗ್ಗೆ ತರಬೇತಿಗಳನ್ನು ನೀಡುತ್ತದೆ. |

| ಕ್ರ .ಸ | ಸಂಸ್ಥೆಯ ಹೆಸರು | ಸ್ಥಾಪನೆ | ವಿಳಾಸ | ಚಟುವಟಿಕೆಗಳು |
|---|---|---|---|---|
| ೫ | ದಕ್ಷಿಣಕನ್ನಡ ಗ್ರಾಮೀಣ ಅಭಿವೃದ್ಧಿ ಸಂಘ | ಜನವರಿ ೨೧ ೧೯೮೩ | ಜ್ಞಾನ ನಿಲಯ, ಬೆಳ್ತಂಗಡಿ ಪೋಸ್ಟ್, ದಕ್ಷಿಣಕನ್ನಡ- ೫೭೪ ೨೧೪ ದೂರವಾಣಿ-(೦೮೨೫೬) ೨೩೪೬೭೩ | ಬಡ ಮಹಿಳೆಯರನ್ನು ಮಹಿಳಾ ಸಬಲೀಕರಣ ಕಾರ್ಯಕ್ರಮಗಳ ಮೂಲಕ ಮಹಿಳೆಯರ ಮತ್ತು ಮಕ್ಕಳ ಹಕ್ಕುಗಳನ್ನು ರಕ್ಷಿಸುವುದು ಮತ್ತು ಪರಿಸರ ಸಂರಕ್ಷಣೆಯ ಯೋಜನೆಗಳನ್ನು ರೂಪಿಸುವುದು. |
| ೬ | ಸಾಮಾಜಿಕ ಸೇವಾ ಸಂಸ್ಥೆ | ಮೇ ೩೧ ೧೯೬೦ | ಫಾದರ್ ಮುಲ್ಲರ್ಸ್ ರೋಡ್, ವೆಲೆನ್ಸಿಯಾ ಮಂಗಳೂರು-೫೭೫ ೦೦೨ ದೂರವಾಣಿ:(೦೮೨೪) ೨೪೩೭೯೫೩, ೨೪೩೭೯೫೪ | ಮಹಿಳೆ,ಮಕ್ಕಳು ಮತ್ತು ಬಾಲ ಕಾರ್ಮಿಕರ ಸಮಸ್ಯೆಗಳನ್ನು ಬಗೆಹರಿಸುವುದು.ಹೆಚ್.ಐ.ವಿ ಯ ಬಗ್ಗೆ ಜನಜಾಗೃತಿಯನ್ನು ಮೂಡಿಸುವುದು. ಬಡ ಕುಟುಂಬಗಳಗೆ ಸಹಾಯ ಹಸ್ತವನ್ನು ಒದಗಿಸುವುದು. |
| ೭ | ಕುಟುಂಬ ಸೇವಾ ಸಂಸ್ಥೆ | ೧೯೬೬ | ಸಾಮಾಜಿಕ ಸೇವಾ ಸಂಸ್ಥೆ ರೋಶನಿ ನಿಲಯ, ಕಂಕನಾಡಿ ಮಂಗಳೂರು-೫೭೫೦೦೨ ದೂರವಾಣಿ: ೨೪೩೪೦೨೩ | ಸ್ವ ಸಹಾಯ ಗುಂಪುಗಳ ಮೂಲಕ ಜನಜಾಗೃತಿಯನ್ನು ಮೂಡಿಸುವುದು ಮತ್ತು ವೃತ್ತಿ ತರಬೇತಿಗಳನ್ನು ನೀಡುತ್ತದೆ. |
| ೮ | ಸಮನ್ವಯ | ಡಿಸೆಂಬರ್ ೧೫ ೧೯೯೮ | ಹಿಲ್ ವ್ಯಿವ್ ಉರ್ವ ಸ್ಟೋರ್,ಅಶೋಕ ನಗರ ಮಂಗಳೂರು-೫೭೫ ೦೦೬ ದೂರವಾಣಿ:(೦೮೨೪)೨೨೧೧ ೦೯ | ಮಹಿಳೆಯರು, ವಿಧ್ಯಾರ್ಥಿಗಳು ಮತ್ತು ಭೂರಹಿತ ಕೃಷಿ ಕಾರ್ಮಿಕರಿಗೆ ಸ್ವ - ಸಹಾಯ ಗುಂಪುಗಳ ಮೂಲಕ ತರಬೇತಿ ಮತ್ತು ಸಲಹೆಗಳನ್ನು ನೀಡುತ್ತದೆ. |

ಮೇಲಿನ ಕೋಷ್ಟಕಗಳಲ್ಲಿ ದಕ್ಷಿಣ ಕನ್ನಡ ಜಿಲ್ಲೆಯ ಕೆಲವು ಸರ್ಕಾರೇತರ ಸಂಸ್ಥೆಗಳ ಕಾರ್ಯನಿರ್ವಹಣೆ ಮತ್ತು ಚಟುವಟಿಕೆಗಳ ಮಾಹಿತಿಯನ್ನು ನೀಡಲಾಗಿದೆ. ಸರ್ಕಾರೇತರ ಸಂಸ್ಥೆಗಳು ಹೆಚ್ಚಿನ ಸಂಖ್ಯೆಯಲ್ಲಿ ಗ್ರಾಮೀಣಾಭಿವೃದ್ಧಿಯನ್ನು ಮಾಡಲು ಶ್ರಮಿಸುತ್ತಿದೆ.

## ದಕ್ಷಿಣ ಕನ್ನಡ ಜಿಲ್ಲೆಯ ಸರ್ಕಾರೇತರ ಸಂಸ್ಥೆಗಳ ವರ್ಗೀಕೃತ ವಿಶ್ಲೇಷಣೆ:

ಸರ್ಕಾರೇತರ ಸಂಸ್ಥೆಗಳು ಗ್ರಾಮೀಣ ಮತ್ತು ನಗರ ಪ್ರದೇಶಗಳ ಅಭಿವೃದ್ಧಿಯಲ್ಲಿ ಪ್ರಮುಖ ಪಾತ್ರವಹಿಸುತ್ತವೆ. ಸರ್ಕಾರೇತರ ಸಂಸ್ಥೆಗಳು ಬಡಜನರಿಗೆ ರಕ್ಷಣೆಯನ್ನು ಒದಗಿಸುವುದಲ್ಲದೆ ಅವರ ಆರ್ಥಿಕ, ಸಾಮಾಜಿಕ ಮತ್ತು ರಾಜಕೀಯ ಬೆಳವಣಿಗೆಯಲ್ಲಿ ಮಹತ್ವದ ಸಹಾಯವನ್ನು ಒದಗಿಸುತ್ತವೆ. ಈ ಕೆಳಗೆ ಸರ್ಕಾರೇತರ ಸಂಸ್ಥೆಗಳ ಸ್ಥಳೀಯ, ರಾಷ್ಟ್ರೀಯ, ಅಂತರಾಷ್ಟ್ರೀಯ, ತಾಲೂಕುವಾರು ಮತ್ತು ಕಾರ್ಯಯೋಜನೆಗಳಿಗನುಗುಣವಾಗಿ ವರ್ಗೀಕರಣದ ಮಾಹಿತಿಗಳನ್ನು ನೀಡಲಾಗಿದೆ.

**ಕೋಷ್ಟಕ ೩.೯ : ದಕ್ಷಿಣ ಕನ್ನಡ ಜಿಲ್ಲೆಯ ಸರ್ಕಾರೇತರ ಸಂಸ್ಥೆಗಳ ವರ್ಗೀಕರಣದ ವಿವರಗಳು**

| ಕ್ರ .ಸ | ಸರ್ಕಾರೇತರ ಸಂಸ್ಥೆಗಳು | ಒಟ್ಟು ಸಂಖ್ಯೆ | ಶೇಕಡವಾರು(%) |
|---|---|---|---|
| ೧ | ಸ್ಥಳೀಯ ಸರ್ಕಾರೇತರ ಸಂಸ್ಥೆಗಳು | ೧೦೪ | ೭೭.೩೧ |
| ೨ | ರಾಷ್ಟ್ರೀಯ ಸರ್ಕಾರೇತರ ಸಂಸ್ಥೆಗಳು | ೨೦ | ೧೪.೯೩ |
| ೩ | ಅಂತರಾಷ್ಟ್ರೀಯ ಸರ್ಕಾರೇತರ ಸಂಸ್ಥೆಗಳು | ೧೦ | ೭.೪೬ |
| ಒಟ್ಟು | | ೧೩೪ | ೧೦೦% |

**ಮೂಲ: ಅನುಷಂಗಿಕ ದತ್ತಾಂಶಗಳು**

ಈ ಮೇಲಿನ ಕೋಷ್ಟಕದಲ್ಲಿ ಉಲ್ಲೇಖಿಸಿರುವಂತೆ ಶೇ.೭೭.೩೧ ರಷ್ಟು ಸರ್ಕಾರೇತರ ಸಂಸ್ಥೆಗಳು ಸ್ಥಳೀಯ ಮಟ್ಟದಲ್ಲಿ ಕಾರ್ಯನಿರ್ವಹಿಸುತ್ತವೆ. ಅಂದರೆ ಸ್ಥಳೀಯ ಸರ್ಕಾರೇತರ ಸಂಸ್ಥೆಗಳು ದಕ್ಷಿಣಕನ್ನಡ ಮತ್ತು ಕರ್ನಾಟಕ ರಾಜ್ಯದೊಳಗೆ ತಮ್ಮ ಕಾರ್ಯಾಚರಣೆಯನ್ನು ಹಮ್ಮಿಕೊಂಡಿರುತ್ತವೆ. ದಕ್ಷಿಣಕನ್ನಡ ಜಿಲ್ಲೆಯಲ್ಲಿ ಸ್ಥಳೀಯ ಸರ್ಕಾರೇತರ ಸಂಸ್ಥೆಗಳು ಹೆಚ್ಚಾಗಿ ಕಾರ್ಯನಿರ್ವಹಿಸುತ್ತವೆ. ಅದೇ ರೀತಿ ಶೇ.೧೪.೯೩ ರಷ್ಟು ಸರ್ಕಾರೇತರ ಸಂಸ್ಥೆಗಳು ರಾಷ್ಟ್ರೀಯ ಮಟ್ಟದಲ್ಲಿ ತಮ್ಮ ಸೇವೆಯನ್ನು

ಸಲ್ಲಿಸುತ್ತಿವೆ ಮತ್ತು ಶೇ. ೭.೪೩ರಷ್ಟು ಸರ್ಕಾರೇತರ ಸಂಸ್ಥೆಗಳು ಅಂತರಾಷ್ಟ್ರೀಯ ಮಟ್ಟದಲ್ಲಿ ತಮ್ಮ ಕಾರ್ಯಯೋಜನೆಗಳನ್ನು ಹಮ್ಮಿಕೊಂಡಿವೆ. ಆದುದರಿಂದ ದಕ್ಷಿಣಕನ್ನಡ ಜಿಲ್ಲೆಯಲ್ಲಿ ಸ್ಥಳೀಯ ಸರ್ಕಾರೇತರ ಸಂಸ್ಥೆಗಳು ಹೆಚ್ಚಾಗಿ ಕಾರ್ಯನಿರ್ವಹಿಸುತ್ತವೆ ಎಂದು ನಮಗೆ ಈ ಮೇಲಿನ ಕೋಷ್ಟಕದಿಂದ ತಿಳಿದುಬರುತ್ತದೆ.

ಈ ಕೆಳಗಿನ ಕೋಷ್ಟಕದಲ್ಲಿ ದಕ್ಷಿಣಕನ್ನಡ ಜಿಲ್ಲೆಯ ಸರ್ಕಾರೇತರ ಸಂಸ್ಥೆಗಳ ತಾಲೂಕುವಾರು ವರ್ಗೀಕರಣದ ಮಾಹಿತಿಯನ್ನು ನೀಡಲಾಗಿದೆ.

**ಕೋಷ್ಟಕ ೩.೧೦ : ಸರ್ಕಾರೇತರ ಸಂಸ್ಥೆಗಳ ತಾಲೂಕುವಾರು ವರ್ಗೀಕರಣದ ವಿವರಗಳು**

| ಕ್ರ .ಸ | ತಾಲೂಕುಗಳು | ಒಟ್ಟು ಸಂಖ್ಯೆ | ಶೇಕಡವಾರು(%) |
|---|---|---|---|
| ೧ | ಮಂಗಳೂರು | ೧೦೯ | ೮೧.೩೪ |
| ೨ | ಪುತ್ತೂರು | ೫ | ೩.೭೩ |
| ೩ | ಬಂಟ್ವಾಳ | ೯ | ೬.೭೨ |
| ೪ | ಬೆಳ್ತಂಗಡಿ | ೯ | ೬.೭೨ |
| ೫ | ಸುಳ್ಯ | ೨ | ೧.೪೯ |
| ಒಟ್ಟು | | ೧೩೪ | ೧೦೦% |

ಮೂಲ: ಅನುಷಂಗಿಕ ದತ್ತಾಂಶಗಳು

ಈ ಕೋಷ್ಟಕದಲ್ಲಿ ತೋರಿಸಿದಂತೆ ದಕ್ಷಿಣಕನ್ನಡ ಜಿಲ್ಲೆಯಲ್ಲಿ ಐದು ತಾಲೂಕುಗಳಿವೆ. ಅವುಗಳು ಯಾವುದೆಂದರೆ ಮಂಗಳೂರು, ಪುತ್ತೂರು, ಬಂಟ್ವಾಳ, ಬೆಳ್ತಂಗಡಿ, ಸುಳ್ಯ . ಈ ಎಲ್ಲಾ ತಾಲೂಕುಗಳ ಪೈಕಿ ಮಂಗಳೂರು ತಾಲೂಕು ಅತೀ ಹೆಚ್ಚು ಶೇ.೮೧.೩೪ ರಷ್ಟು ಸರ್ಕಾರೇತರ ಸಂಸ್ಥೆಗಳನ್ನು ಹೊಂದಿದೆ. ಅದೇ ರೀತಿ ಪುತ್ತೂರು ತಾಲೂಕು ಶೇ. ೩.೭೩ ರಷ್ಟು , ಬಂಟ್ವಾಳ ತಾಲೂಕು ಶೇ. ೬.೭೨ ರಷ್ಟು, ಬೆಳ್ತಂಗಡಿ ತಾಲೂಕು ಶೇ.೬.೭೨ ರಷ್ಟು, ಸುಳ್ಯ ತಾಲೂಕು ಶೇ.೧.೪೯ ರಷ್ಟು ಸರ್ಕಾರೇತರ ಸಂಸ್ಥೆಗಳನ್ನು ಹೊಂದಿದೆ.

ಈ ಸಂಸ್ಥೆಗಳಲ್ಲಿ ಕೆಲವು ಸರ್ಕಾರೇತರ ಸಂಸ್ಥೆಗಳು ರಾಷ್ಟೀಯ ಮತ್ತು ಅಂತರಾಷ್ಟ್ರೀಯ ಮಟ್ಟದಲ್ಲಿ ತಮ್ಮ ಕಾರ್ಯ ಚಟುವಟಿಕೆಗಳನ್ನು ನಿರ್ವಹಿಸುತ್ತವೆ. ದಕ್ಷಿಣಕನ್ನಡ ಜಿಲ್ಲೆಯಲ್ಲಿ ಸರಿಸುಮಾರು ೧೩೪ ಸರ್ಕಾರೇತರ ಸಂಸ್ಥೆಗಳವೆ (೨೦೦೭ರ ಸಮೀಕ್ಷೆಯ ಪ್ರಕಾರ) ಕಾಲಕ್ರಮೇಣ ಅವುಗಳ ಸಂಖ್ಯೆ ಮತ್ತು ಸ್ಥಾನಮಾನಗಳು ಅಭಿವೃದ್ಧಿ ಹೊಂದುತ್ತಾ ಬಂದಿವೆ.

ಈ ಕೆಳಗಿನ ಕೋಷ್ಟಕದಲ್ಲಿ ದಕ್ಷಿಣಕನ್ನಡ ಜಿಲ್ಲೆಯ ಸರ್ಕಾರೇತರ ಸಂಸ್ಥೆಗಳ ಕಾರ್ಯಯೋಜನೆಗೆ ಅನುಗುಣವಾಗಿ ವರ್ಗೀಕರಣದ ಮಾಹಿತಿಯನ್ನು ನೀಡಲಾಗಿದೆ.

**ಕೋಷ್ಟಕ ೩.೧೧ : ಸರ್ಕಾರೇತರ ಸಂಸ್ಥೆಗಳ ವರ್ಗೀಕರಣ ಅವುಗಳ ಕಾರ್ಯಗಳಗನುಗುಣವಾಗಿ**

| ಕ್ರ .ಸ | ಸರ್ಕಾರೇತರ ಸಂಸ್ಥೆಗಳ ವಿಧ | ಒಟ್ಟು ಸಂಖ್ಯೆ | ಶೇಕಡವಾರು(%) |
|---|---|---|---|
| ೧ | ವೃದ್ಯಾಪ್ಯಕ್ಕೆ ಸೇರಿದ ಸಂಸ್ಥೆಗಳು | ೧೮ | ೧೩.೪೩ |
| ೨ | ಕುಡಿತದ ಚಟವನ್ನು ಬಿಡಿಸುವ ಸಂಸ್ಥೆಗಳು | ೨ | ೧.೪೯ |
| ೩ | ಕೃಷಿ ಅಭಿವೃದ್ಧಿ ಸಂಸ್ಥೆಗಳು | ೫ | ೩.೭೩ |
| ೪ | ಶೈಕ್ಷಣಿಕ ಸಂಸ್ಥೆಗಳು | ೨೦ | ೧೪.೯೩ |
| ೫ | ಪರಿಸರ ಸಂರಕ್ಷಣಾ ಸಂಸ್ಥೆಗಳು | ೧೪ | ೧೦.೪೫ |
| ೬ | ಆರೋಗ್ಯ ಅಭಿವೃದ್ಧಿ ಸಂಸ್ಥೆಗಳು | ೧೯ | ೧೪.೧೮ |
| ೭ | ಪರಿಶಿಷ್ಟ ಜಾತಿ ಮತ್ತು ಪಂಗಡಗಳ ಅಭಿವೃದ್ಧಿ ಸಂಸ್ಥೆಗಳು | ೬ | ೪.೪೮ |
| ೮ | ತರಬೇತಿ ಸಂಸ್ಥೆಗಳು | ೧೧ | ೮.೨೧ |
| ೯ | ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಸಂಸ್ಥೆಗಳು | ೨೬ | ೧೯.೪೦ |
| ೧೦ | ಇತರೆ | ೧೩ | ೯.೭೦ |
| ಒಟ್ಟು | | ೧೩೪ | ೧೦೦% |

ಮೂಲ: ಅನುಷಂಗಿಕ ದತ್ತಾಂಶಗಳು

ಈ ಕೋಷ್ಟಕದ ವರ್ಗೀಕರಣದ ಪ್ರಕಾರ ಅತೀ ಹೆಚ್ಚು ಶೇ.೧೯.೪೦ ರಷ್ಟು ಸರ್ಕಾರೇತರ ಸಂಸ್ಥೆಗಳು ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಕ್ಷೇತ್ರಗಳಲ್ಲಿ ತಮ್ಮನ್ನು ತಾವು ತೊಡಗಿಸಿಕೊಂಡಿವೆ. ಅದೇ ರೀತಿ ಶೇ.೧೪.೯೩ ರಷ್ಟು ಸರ್ಕಾರೇತರ ಸಂಸ್ಥೆಗಳು ಶೈಕ್ಷಣಿಕ ಕ್ಷೇತ್ರಗಳಲ್ಲಿ, ಶೇ.೧೩.೪೩ ರಷ್ಟು ಸರ್ಕಾರೇತರ ಸಂಸ್ಥೆಗಳುವೃದ್ಯಾಪ್ಯಕ್ಕೆ ಸೇರಿದ ಸಂಸ್ಥೆಗಳು, ಶೇ.೧.೪೯ ರಷ್ಟು ಕುಡಿತದ ಚಟವನ್ನು ಬಿಡಿಸುವ ಸರ್ಕಾರೇತರ ಸಂಸ್ಥೆಗಳು, ಶೇ.೩.೭೩ ರಷ್ಟು ಕೃಷಿ ಅಭಿವೃದ್ಧಿಗೆ ಸೇರಿದ ಸರ್ಕಾರೇತರ ಸಂಸ್ಥೆಗಳು, ಶೇ.೧೦.೪೫ ರಷ್ಟು ಪರಿಸರ ಸಂರಕ್ಷಣೆಗೆ ಸೇರಿದ ಸರ್ಕಾರೇತರ ಸಂಸ್ಥೆಗಳು, ಶೇ.೧೪.೧೮ ರಷ್ಟು ಆರೋಗ್ಯ ಅಭಿವೃದ್ಧಿಗೆ ಸೇರಿದ ಸರ್ಕಾರೇತರ ಸಂಸ್ಥೆಗಳು, ಶೇ.೪.೪೮ ರಷ್ಟು ಪರಿಶಿಷ್ಟ ಜಾತಿ ಮತ್ತು ಪಂಗಡಗಳ ಅಭಿವೃದ್ಧಿಗೆ ಸೇರಿದ ಸರ್ಕಾರೇತರ ಸಂಸ್ಥೆಗಳು, ಶೇ.೮.೨೧ ರಷ್ಟು ತರಬೇತಿಯನ್ನು ನೀಡುವ ಸರ್ಕಾರೇತರ ಸಂಸ್ಥೆಗಳು, ಶೇ.೯.೨೦ ರಷ್ಟು ಇತರೆ ಕಾರ್ಯ ಚಟುವಟಿಕೆಗಳಲ್ಲಿ ತಮ್ಮನ್ನು ತಾವು ತೊಡಗಿಸಿಕೊಂಡು ಜನರ ಅಭಿವೃದ್ಧಿಯನ್ನು ಸಾಧಿಸಲು ಶ್ರಮಿಸುತ್ತಿದೆ.

## ೩.೪ ಸರ್ಕಾರೇತರ ಸಂಸ್ಥೆಗಳ ಸಮಸ್ಯೆಗಳು ಇತಿಮಿತಿಗಳು ಮತ್ತು ಬಲಪಡಿಸುವಿಕೆ :

ಸರ್ಕಾರೇತರ ಸಂಸ್ಥೆಗಳು ಎದುರಿಸುತ್ತಿರುವ ಹಲವಾರು ಸಮಸ್ಯೆಗಳು ಈ ಕೆಳಗಿನಂತಿವೆ:

- ಅನುದಾನದ ಒಳ ಹರಿಯುವಿಕೆಯ ಅನಿಶ್ಚಿತತೆ ಮತ್ತು ಅಸಮರ್ಪಕತೆ
- ಸರಕಾರ ಮತ್ತು ಅಧಿಕೃತ ಸಂಸ್ಥೆಗಳೊಂದಿಗೆ ಹದಗೆಟ್ಟ ಸಂಬಂಧ.
- ಸರ್ಕಾರೇತರ ಸಂಸ್ಥೆಗಳಲ್ಲಿ ಕೆಲಸ ಮಾಡಲು ಚತುರ ಮತ್ತು ಸಮರ್ಪಣಾ ಭಾವದ ವ್ಯಕ್ತಿಗಳ ಕೊರತೆ.
- ಸರ್ಕಾರೇತರ ಸಂಸ್ಥೆಗಳ ಆಡಳಿತದಲ್ಲಿ ಫಲಾನುಭವಿಗಳ ಅಸಮರ್ಪಕ ಮತ್ತು ಸಾಂಕೇತಿಕ ಭಾಗವಹಿಸುವಿಕೆ ಮತ್ತು ಸರ್ಕಾರೇತರ ಸಂಸ್ಥೆಗಳು ಪ್ರಾಯೋಜಿಸುವ ಕಾರ್ಯಕ್ರಮಗಳಿಂದ ಪ್ರಯೋಜನ ಪಡೆಯುವ ಇಚ್ಛೆ ಸ್ವಸಹಾಯಕ್ಕೆ ಸಂಬಂಧಿಸಿ ಅವರ ಋಣಾತ್ಮಕ ಪ್ರವೃತ್ತಿ.
- ಸ್ಥಳೀಯ ರಾಜಕೀಯ ಹಿತಾಸಕ್ತಿಗಳೊಂದಿಗೆ ವೈರತ್ವ ಮತ್ತು ಸಾಂದರ್ಭಿಕ ಸಂಘರ್ಷ.
- ಗ್ರಾಮೀಣಾಭಿವೃದ್ಧಿ ಅಧಿಕಾರಶಾಹಿ ಸಾಮಾನ್ಯವಾಗಿ ಸರ್ಕಾರೇತರ ಸಂಸ್ಥೆಗಳಂತಹ ಕೆಲಸ ಕಾರ್ಯಗಳನ್ನು ಗಣನೆಗೆ ತೆಗೆದುಕೊಳ್ಳುವುದಿಲ್ಲ. ಸರ್ಕಾರೇತರ ಸಂಸ್ಥೆಗಳ ಮೇಲೆ ನೇರವಾಗಿ ಇಲ್ಲವೇ ಪರೋಕ್ಷವಾಗಿ ನಿಯಂತ್ರಣ ಸಾಧಿಸಲು, ಸರ್ಕಾರೇತರ ಸಂಸ್ಥೆಗಳು ನಿರೀಕ್ಷಿಸಿದ ಮಟ್ಟದಲ್ಲಿ ಸೇವೆ ಒದಗಿಸಲು ಸಾಧ್ಯವಾಗದಂತೆ ಮಾಡಲು, ಅಧಿಕಾರಶಾಹಿ ಈ ರೀತಿಯ ಪ್ರವೃತ್ತಿಯನ್ನು ರೂಢಿಸಿಕೊಳ್ಳುತ್ತದೆ.

- ವೃತ್ತಿಪರತೆಯ ಕೊರತೆ ಸರ್ಕಾರೇತರ ಸಂಸ್ಥೆಗಳನ್ನು ಭಾಧಿಸುವ ಪ್ರಮುಖ ಸಮಸ್ಯೆಯಾಗಿದೆ. ಕೆಲವು ಸಂಸ್ಥೆಗಳು ವೃತ್ತಿಪರತೆಯನ್ನು ಅಭಿವೃದ್ಧಿ ಪಡಿಸಿದರೆ ಇತರ ಕೆಲವು ಸಂಸ್ಥೆಗಳು ವೃತ್ತಿಪರ ಸಹಾಯವನ್ನು ಗಳಿಸುವ ಪ್ರಯತ್ನವನ್ನು ಮಾಡಿಲ್ಲ. ಇಲ್ಲಿ ಸರ್ಕಾರೇತರ ಸಂಸ್ಥೆಗಳು ಸ್ಥಳೀಯ ಮತ್ತು ಪ್ರಾದೇಶಿಕ ಸಂಪನ್ಮೂಲಗಳ ಅಭಿವೃದ್ಧಿ ಸಾಧ್ಯತೆಯನ್ನು ಸರಿಯಾಗಿ ಅಂದಾಜಿಸುವ ಸ್ಥಿತಿಯಲ್ಲಿಲ್ಲ.
- ಸರ್ಕಾರೇತರ ಸಂಸ್ಥೆಗಳಿಗೆ ಜನರ ಸಹಕಾರ ನಿರೀಕ್ಷಿತ ಮಟ್ಟದಲಿಲ್ಲ ತಮ್ಮ ಕಡೆಯಿಂದ ಯಾವುದೇ ತ್ಯಾಗವಿಲ್ಲದೆ ಜನರು ಸಾಮಾನ್ಯವಾಗಿ ಪ್ರಯೋಜನಗಳನ್ನು ಬಯಸುತ್ತಾರೆ. ಸರ್ಕಾರೇತರ ಸಂಸ್ಥೆಗಳು ನಿರ್ಮಿಸಿದ ಸಮುದಾಯ ಮಂದಿರಗಳಂತಹ ಆಸ್ತಿಗಳನ್ನು ಕೂಡ ಜನರು ಸಮರ್ಪಕವಾಗಿ ನೋಡಿಕೊಳ್ಳುತ್ತಿಲ್ಲ.
- ಸರ್ಕಾರೇತರ ಸಂಸ್ಥೆಗಳು ಎದುರಿಸುತ್ತಿರುವ ಸಮಸ್ಯೆಗಳನ್ನು ಕಡಿಮೆಗೊಳಿಸಲು ಯೋಜಿತ ಪ್ರಯತ್ನಗಳು ಅಗತ್ಯ. ಸಮುದಾಯಕ್ಕೆ ಈ ಸಂಸ್ಥೆಗಳು ಸೇವೆ ಸಲ್ಲಿಸುವ ವರೆಗೆ, ಅವುಗಳಿಗೆ ಸಹಕಾರಿ ಇಲಾಖೆಗಳು ಮತ್ತು ಜನರಿಂದ ದೊಡ್ಡ ಪ್ರಮಾಣದಲ್ಲಿ ಸಹಕಾರ ಅಪೇಕ್ಷಣೀಯ.

## ಸರ್ಕಾರೇತರ ಸಂಸ್ಥೆಗಳ ಬಲಪಡಿಸುವಿಕೆ :

ಸ್ಪಷ್ಟ ಆದ್ಯತೆಗಳಿದ್ದರೆ ಮಾತ್ರ ಸರ್ಕಾರೇತರ ಸಂಸ್ಥೆಗಳು ತಮ್ಮ ಗುರಿಸಾಧಿಸಲು ಸಾಧ್ಯ. ಸರಕಾರಿ ಯೋಜನೆಗಳ ಯಶಸ್ವಿಯಾಗಿ ಮತ್ತು ಶೈಕ್ಷಣಿಕ ಮತ್ತು ಪ್ರೇರೇಪಣಾ ಕಾರ್ಯಕ್ರಮಗಳು ಮತ್ತು ಉದ್ಯೋಗ ಮತ್ತು ಉತ್ಪಾದನೆಯ ಮೂರ್ತ ಯೋಜನೆಗಳ ಮೂಲಕ ಸರ್ಕಾರೇತರ ಚಟುವಟಿಕೆಗಳು ಪ್ರಪ್ರಥಮವಾಗಿ ಜನರ ಬೆಂಬಲ ಮತ್ತು ಚಟುವಟಿಕೆಗಳನ್ನು ಕ್ರೋಢೀಕರಿಸಬೇಕು.

ಸರ್ಕಾರೇತರ ಸಂಸ್ಥೆಗಳು ಫಲಾನುಭವಿಗಳ ಹಿತದೃಷ್ಟಿಯಿಂದ ಮಾತ್ರವಲ್ಲದೆ ತಮ್ಮ ಸಂಪನ್ಮೂಲಗಳನ್ನು ಬಲಪಡಿಸುವ ಉದ್ದೇಶದಿಂದ ಆದಾಯ ಸೃಷ್ಟಿಸುವಂತಹ ಚಟುವಟಿಕೆಗಳ ಕಡೆಗೆ ಗಮನ ಹರಿಸಬೇಕು. ಸರ್ಕಾರೇತರ ಸಂಸ್ಥೆಗಳು ಮತ್ತು ಸರಕಾರಿ ಇಲಾಖೆಗಳ ನಡುವಿನ ಸಂಬಂಧ ಪಾಲುದಾರಿಕೆಯ ಪರಸ್ಪರ ನಂಬಿಕೆಯ, ವಿಶ್ವಾಸದ್ದಾಗಿರಬೇಕು ಸರಕಾರಿ ಇಲಾಖೆಗಳಿಂದ ಹೆಚ್ಚು ಪ್ರಾಧಾನ್ಯತೆ ಸಿಗದ ವಿಷಯಗಳ ಕಡೆಗೆ ಸರ್ಕಾರೇತರ ಸಂಸ್ಥೆಗಳು ಗಮನ ಹರಿಸುವುದು ಒಳಿತು. ಸರಕಾರಿ ಇಲಾಖೆಗಳು ಮತ್ತು ಸರ್ಕಾರೇತರ ಸಂಸ್ಥೆಗಳ ಮಧ್ಯ ಒಂದು ರೀತಿಯ ಸಂಬಂಧವಿದೆ ಅದನ್ನು ಮೂರು ವಿಧಗಳಲ್ಲಿ ಕಾಣಬಹುದು.

- ಶಾಲಾ ಶಿಕ್ಷಕರಿಗೆ ಸಹಾಯಕ ದಾದಿಯರಿಗೆ ಸಮುದಾಯ ಆರೋಗ್ಯ ಸೇವಕರಿಗೆ ತರಬೇತಿ ನೀಡುವಂತಹ ಆಯ್ದು ಚಟುವಟಿಕೆಗಳಲ್ಲಿ ಸರ್ಕಾರೇತರ ಸಂಸ್ಥೆಗಳನ್ನು ಒಳಗೊಳ್ಳಬಹುದು.
- ಸರ್ಕಾರೇತರ ಸಂಸ್ಥೆಗಳ ಆಂಶಿಕ ನಿರ್ವಹಣಾ ವೆಚ್ಚವನ್ನು ಭರಿಸುವಂತೆ ಸಾಧ್ಯವಾಗಿಸಲು ಅವುಗಳಿಗೆ ವಾರ್ಷಿಕ ಆವರ್ತನ ಅನುದಾನವನ್ನು ಒದಗಿಸುವುದು.
- ಸ್ಥಳೀಯ ಮಟ್ಟದಲ್ಲಿ ಕಾರ್ಯಕ್ರಮಗಳಸ್ನು ಪರಿಶೀಲಿಸುವಂತಹ ಸಮಿತಿಗಳಿಗೆ ಸರ್ಕಾರೇತರ ಸಂಸ್ಥೆಗಳನ್ನು ನೇಮಿಸುವುದು.

ಸರಕಾರಿ ಇಲಾಖೆಗಳು ಸರ್ಕಾರೇತರ ಸಂಸ್ಥೆಗಳಿಗೆ ಹಲವಾರು ವಿಧಗಳಲ್ಲಿ ಸಹಾಯ ಮಾಡಬಹುದು. ಸರ್ಕಾರೇತರ ಸಂಸ್ಥೆಗಳನ್ನು ಅಭಿವೃದ್ಧಿ ಯೋಜನೆಗಳ ತಯಾರಿಯಲ್ಲಿ ಸೇರಿಸಬಹುದು. ಸರಕಾರ ಸರ್ಕಾರೇತರ ಸಂಸ್ಥೆಗಳಿಗೆ ಆಡಳತಾತ್ಮಕ ಬೆಂಬಲ ಮತ್ತು ಪ್ರೋತ್ಸಾಹವನ್ನು ವಿಸ್ತರಿಸಬೇಕು. ಸರ್ಕಾರೇತರ ಸಂಸ್ಥೆಗಳಿಗೆ ಅಗತ್ಯವಾಗಿರುವ ತಾಂತ್ರಿಕ ಸಹಾಯವನ್ನು ಕೂಡ ಸರಕಾರ ಒದಗಿಸಬಹುದು. ಅಲ್ಲದೆ ಸರ್ಕಾರೇತರ ಸಂಸ್ಥೆಗಳೊಳಗೆ ಮಧುರ ಬಾಂಧವ್ಯ ಇರಬೇಕು. ಗ್ರಾಮೀಣ ಪುನರ್ ನಿರ್ಮಾಣದಲ್ಲಿ ತೊಡಗಿರುವ ವಿವಿಧ ಸಂಸ್ಥೆಗಳ ಚಟುವಟಿಕೆಗಳನ್ನು ಸಮನ್ವಯಗೊಳಿಸುವ ಅಗತ್ಯವಿದೆ. ವಿವಿಧ ರಾಜ್ಯಗಳಲ್ಲಿ ಮತ್ತು ವಿದೇಶಗಳಲ್ಲಿ ರಚನಾತ್ಮಕ ಚಟುವಟಿಕೆಗಳಲ್ಲಿ ತೊಡಗಿರುವ ಸಂಘಟನೆಗಳ ಮಧ್ಯ ಮಾಹಿತಿ ಮತ್ತು ಅನುಭವಗಳ ವಿನಿಮಯ ಅತಿ ಅಗತ್ಯ.

ಸರ್ಕಾರೇತರ ಸಂಸ್ಥೆಗಳು ಸರಕಾರವನ್ನು ಎಲ್ಲಾ ಹಂತಗಳಲ್ಲಿ ಅವಲಂಬಿಸಬಾರದು ಅವುಗಳು ಸ್ವತಂತ್ರವಾಗಿ ಕಾರ್ಯನಿರ್ವಹಿಸಲು ಅವಕಾಶಗಳನ್ನು ಒದಗಿಸಬೇಕು ಮತ್ತು ಅದಕ್ಕಾಗಿ ಸಹಾಯ ಮತ್ತು ಪ್ರೋತ್ಸಾಹಗಳನ್ನು ನೀಡಬೇಕು.



# ಅಧ್ಯಾಯ – ೪
# ಮಾಹಿತಿ ವಿಶ್ಲೇಷಣೆ

ಗ್ರಾಮೀಣ ಅಭಿವೃದ್ಧಿಯಲ್ಲಿ ಸರ್ಕಾರೇತರ ಸಂಸ್ಥೆಗಳ ಪಾತ್ರವು ಅತೀ ಮುಖ್ಯವೆನಿಸುತ್ತದೆ. ಈ ಸಮೀಕ್ಷೆಯು ಸರ್ಕಾರೇತರ ಸಂಸ್ಥೆಗಳು ಹಮ್ಮಿಕೊಂಡಿರುವ ಗ್ರಾಮೀಣಾಭಿವೃದ್ಧಿ ಯೋಜನೆಗಳು ಮತ್ತು ಗ್ರಾಮೀಣ ಸಮಾಜದಲ್ಲಿ ಆದಂತಹ ಬದಲಾವಣೆ ಮತ್ತು ಅಭಿವೃದ್ಧಿಯನ್ನು ತಿಳಿಯಲು ಅತೀ ಉಪಯುಕ್ತವೆನಿಸುತ್ತದೆ.

ದಕ್ಷಿಣ ಕನ್ನಡ ಜಿಲ್ಲೆಯ ವ್ಯಾಪ್ತಿಯಲ್ಲಿ ನಡೆಸಿದ ಈ ಅಧ್ಯಯನದಲ್ಲಿ ಮಾಹಿತಿಗಳನ್ನು ಪ್ರಶ್ನಾವಳಿ, ಸಂದರ್ಶನ ಮತ್ತು ಅವಲೋಕನದ ಮೂಲಕ ವಿಶ್ಲೇಷಣೆ ಮಾಡಲಾಗಿದೆ. ಈ ಅಧ್ಯಯನದಲ್ಲಿ ರೇಖಾಚಿತ್ರ ಮತ್ತು ಕೋಷ್ಟಕಗಳನ್ನು ಅಳವಡಿಸಲಾಗಿದೆ. ಪ್ರಸ್ತುತ ಅಧ್ಯಯನದಲ್ಲಿ ದಕ್ಷಿಣ ಕನ್ನಡ ಜಿಲ್ಲೆಯ ಐದು ತಾಲೂಕುಗಳಾದ ಮಂಗಳೂರು, ಬಂಟ್ವಾಳ, ಬೆಳ್ತಂಗಡಿ, ಪುತ್ತೂರು ಮತ್ತು ಸುಳ್ಯದಲ್ಲಿ ಕಾರ್ಯಾಚರಿಸುತ್ತಿರುವ ವಿವಿಧ ಪ್ರದೇಶಗಳ ೧೦ ಸರ್ಕಾರೇತರ ಸಂಸ್ಥೆಗಳಿಂದ ಪ್ರತೀ ಸರ್ಕಾರೇತರ ಸಂಸ್ಥೆಗಳಿಗೆ ಸೇರಿದ ೧೦ ಫಲಾನುಭವಿಗಳು ಅಂದರೆ ಒಟ್ಟು ೧೦೦ ಫಲಾನುಭವಿಗಳಿಂದ ಮಾಹಿತಿಯನ್ನು ಪಡೆಯಲಾಗಿದೆ.

ಪ್ರಾಥಮಿಕ ಮೂಲದಿಂದ ಸಂಗ್ರಹಿಸಲಾದ ಅಂಕಿ ಅಂಶಗಳ ವಿಶ್ಲೇಷಣೆಯನ್ನು ಈ ಕೆಳಗೆ ನಮೂದಿಸಲಾಗಿದೆ.

**ಫಲಾನುಭವಿಗಳ ಸಾಮಾನ್ಯ ವಿವರಗಳು :**

ಈ ಕೆಳಗಿನ ಕೋಷ್ಟಕಗಳಲ್ಲಿ ಸರ್ಕಾರೇತರ ಸಂಸ್ಥೆಗಳ ಫಲಾನುಭವಿಗಳ ವಯೋಮಾನದ ವಿವರಗಳನ್ನು ನೀಡಲಾಗಿದೆ. ಸರ್ಕಾರೇತರ ಸಂಸ್ಥೆಗಳ ೧೦೦ ಫಲಾನುಭವಿಗಳಿಗೆ ಪ್ರಶ್ನಾವಳಿಗಳನ್ನು ನಡೆಸಿ ಅವರ ಮಾಹಿತಿ ಮತ್ತು ಅಭಿಪ್ರಾಯಗಳನ್ನು ಸಂಗ್ರಹಿಸಲಾಗಿದೆ.

**ಕೋಷ್ಟಕ ೪.೧ ಫಲಾನುಭವಿಗಳ ವರ್ಗೀಕರಣ ವಯೋಮಾನದ ಆಧಾರದ ಮೇಲೆ.**

| ವಯಸ್ಸು | ಫಲಾನುಭವಿಗಳ ಸಂಖ್ಯೆ | ಶೇಕಡವಾರು (%) |
|---|---|---|
| ೨೦ಕ್ಕಿಂತ ಕಡಿಮೆ | ೨ | ೨ |
| ೨೦–೩೦ | ೨೧ | ೨೧ |
| ೩೦–೪೦ | ೩೮ | ೩೮ |
| ೪೦–೫೦ | ೨೪ | ೨೪ |
| ೫೦–೬೦ | ೧೨ | ೧೨ |
| ೬೦ಕ್ಕಿಂತ ಹೆಚ್ಚು | ೩ | ೩ |
| ಒಟ್ಟು | ೧೦೦ | ೧೦೦ % |

ಮೂಲ : ಸಂಶೋಧಕರ ಕ್ಷೇತ್ರಕಾರ್ಯಾಧರಿತ ಮಾಹಿತಿ

ಈ ಮೇಲಿನ ಕೋಷ್ಟಕದಲ್ಲಿ ತಿಳಿಸಿರುವಂತೆ ಶೇಕಡಾ ೨ ರಷ್ಟು ಫಲಾನುಭವಿಗಳು ಇಪ್ಪತ್ತಕ್ಕಿಂತ ಕಡಿಮೆ ವಯಸ್ಸಿನವರಾಗಿದ್ದಾರೆ. ಶೇಕಡಾ ೨೧ ರಷ್ಟು ಫಲಾನುಭವಿಗಳು ಇಪ್ಪತ್ತರಿಂದ ಮೂವತ್ತು ವಯಸ್ಸಿನ ಒಳಗಿನವರಾಗಿದ್ದಾರೆ. ಹಾಗೂ ಶೇಕಡಾ ೩೮ ರಷ್ಟು ಫಲಾನುಭವಿಗಳು ಮೂವತ್ತರಿಂದ ನಲ್ವತ್ತು ವಯಸ್ಸಿನ ಒಳಗಿನವರಾಗಿದ್ದಾರೆ. ಮತ್ತು ಶೇಕಡಾ ೨೪ ರಷ್ಟು ಫಲಾನುಭವಿಗಳು ನಲ್ವತ್ತರಿಂದ ಐವತ್ತು ವಯಸ್ಸಿನ ಒಳಗಿನವರಾಗಿದ್ದಾರೆ. ಹಾಗೂ ಶೇಕಡಾ ೧೨ ರಷ್ಟು ಫಲಾನುಭವಿಗಳು ಐವತ್ತರಿಂದ ಅರುವತ್ತು ವಯಸ್ಸಿನ ಒಳಗಿನವರಾಗಿದ್ದಾರೆ. ಶೇಕಡಾ ೩ ರಷ್ಟು ಫಲಾನುಭವಿಗಳು ಅರುವತ್ತಕ್ಕಿಂತ ಹೆಚ್ಚಿನ ವಯೋಮಾನವನ್ನು ಹೊಂದಿದ್ದಾರೆ.

ಈ ಅಂಕಿಅಂಶಗಳಿಂದ ತಿಳಿಯುವುದೇನೆಂದರೆ ಮೂವತ್ತರಿಂದ ಐವತ್ತು ವರ್ಷದೊಳಗಿನ ಜನರು ಹೆಚ್ಚಿನ ಸಂಖ್ಯೆಯಲ್ಲಿ ಸರ್ಕಾರೇತರ ಸಂಸ್ಥೆಗಳ ಫಲಾನುಭವಿಗಳಾಗಿದ್ದಾರೆ.

**ಫಲಾನುಭವಿಗಳ ಶೈಕ್ಷಣಿಕ ವಿವರಗಳು :**

ಶಿಕ್ಷಣವು ಸಾಮಾಜಿಕ ಅಭಿವೃದ್ಧಿಯಲ್ಲಿ ಅತೀ ಮುಖ್ಯವಾದ ಪಾತ್ರವನ್ನು ವಹಿಸುತ್ತದೆ. ಒಂದು ದೇಶವು ಅಭಿವೃದ್ಧಿಯನ್ನು ಹೊಂದಬೇಕಾದರೆ ಆ ದೇಶದ ಜನರು ಉತ್ತಮ ಶಿಕ್ಷಣವನ್ನು ಪಡೆಯಬೇಕು. ಶಿಕ್ಷಣವು ಗ್ರಾಮೀಣ ಅಭಿವೃದ್ಧಿಯಲ್ಲಿ ಅತೀ ಮುಖ್ಯವೆನಿಸುತ್ತದೆ. ಗ್ರಾಮೀಣ ಜನರಿಗೆ ಉತ್ತಮವಾದ ಶಿಕ್ಷಣವನ್ನು ನೀಡುವುದರಿಂದ ಗ್ರಾಮೀಣ ಅಭಿವೃದ್ಧಿಯನ್ನು ಸಾಧಿಸಲು ಸಾಧ್ಯವಾಗುತ್ತದೆ. ಈ ಕೆಳಗಿನ ಕೋಷ್ಟಕಗಳಲ್ಲಿ ಸರ್ಕಾರೇತರ ಸಂಸ್ಥೆಗಳ ಫಲಾನುಭವಿಗಳು ಹೊಂದಿರುವ ಶೈಕ್ಷಣಿಕ ವಿವರಗಳನ್ನು ನೀಡಲಾಗಿದೆ.

**ಕೋಷ್ಟಕ ೪.೨ ಫಲಾನುಭವಿಗಳ ಶೈಕ್ಷಣಿಕ ವಿವರಗಳು.**

| ಕ್ರ.ಸ | ವರ್ಗೀಕರಣ | ಫಲಾನುಭವಿಗಳ ಸಂಖ್ಯೆ | ಶೇಕಡವಾರು (%) |
|---|---|---|---|
| ೧ | ಅನಕ್ಷರಸ್ಥ | ೨೮ | ೨೮ |
| ೨ | ಪ್ರಾಥಮಿಕ ಶಿಕ್ಷಣ | ೪೨ | ೪೨ |
| ೩ | ಪ್ರೌಢ ಶಿಕ್ಷಣ | ೧೯ | ೧೯ |
| ೪ | ಪದವಿ ಪೂರ್ವ | ೭ | ೭ |
| ೫ | ಪದವಿ ಶಿಕ್ಷಣ | ೨ | ೨ |
| ೬ | ಸ್ನಾತಕೋತ್ತರ | ೦ | ೦ |
| ೭ | ಇತರೆ | ೨ | ೨ |
| | ಒಟ್ಟು | ೧೦೦ | ೧೦೦% |

ಮೂಲ : ಸಂಶೋಧಕರ ಕ್ಷೇತ್ರಕಾರ್ಯಾಧರಿತ ಮಾಹಿತಿ

## ಫಲಾನುಭವಿಗಳ ಶೈಕ್ಷಣಿಕ ವಿವರಗಳು




**ರೇಖಾ ನಕ್ಷೆ ೪.೧ ಮೂಲ : ಸಂಶೋಧಕರ ಕ್ಷೇತ್ರಕಾರ್ಯಾಧರಿತ ಮಾಹಿತಿ**

ಈ ಮೇಲಿನ ಕೋಷ್ಟಕದಲ್ಲಿ ಉಲ್ಲೇಖಿಸಿರುವಂತೆ ಶೇಕಡಾ ೪೨ ರಷ್ಟು ಸರ್ಕಾರೇತರ ಸಂಸ್ಥೆಗಳ ಫಲಾನುಭವಿಗಳು ತಮ್ಮ ಪ್ರಾಥಮಿಕ ಶಿಕ್ಷಣವನ್ನು ಪಡೆದುಕೊಂಡಿರುತ್ತಾರೆ. ಶೇಕಡಾ ೧೯ ರಷ್ಟು ಫಲಾನುಭವಿಗಳು ಪ್ರೌಢ ಶಿಕ್ಷಣವನ್ನು, ಶೇಕಡಾ ೭ ರಷ್ಟು ಫಲಾನುಭವಿಗಳು ಪದವಿ ಪೂರ್ವ ಶಿಕ್ಷಣವನ್ನು ಹಾಗೂ ಶೇಕಡಾ ೨ ರಷ್ಟು ಫಲಾನುಭವಿಗಳು ತಮ್ಮ ಪದವಿ ಶಿಕ್ಷಣವನ್ನು ಹೊಂದಿದವರಾಗಿದ್ದಾರೆ. ಶೇಕಡಾ ೨೮ ರಷ್ಟು ಫಲಾನುಭವಿಗಳು ಅನಕ್ಷರಸ್ಥರಾಗಿದ್ದು , ಸ್ನಾತಕೊತ್ತರ ಶಿಕ್ಷಣವನ್ನು ಹೊಂದಿದವರ ಸಂಖ್ಯೆಯು ಶೂನ್ಯವಾಗಿದೆ. ಹಾಗೂ ಶೇಕಡಾ ೨ ರಷ್ಟು ಫಲಾನುಭವಿಗಳು ಇತರ ಶೈಕ್ಷಣಿಕ ಮೂಲಗಳಿಂದ ಶಿಕ್ಷಣವನ್ನು ಪಡೆದಿರುತ್ತಾರೆ.

ಈ ಅಂಕಿ ಅಂಶಗಳನ್ನು ಗಮನಿಸಿದಾಗ ಸರ್ಕಾರೇತರ ಸಂಸ್ಥೆಗಳ ಫಲಾನುಭವಿಗಳು ಹೆಚ್ಚಿನ ಸಂಖ್ಯೆಯಲ್ಲಿ ತಮ್ಮ ಪ್ರಾಥಮಿಕ ಶಿಕ್ಷಣವನ್ನು ಪಡೆದಿರುತ್ತಾರೆ. ಹಾಗೆಯೇ ಒಟ್ಟು ಫಲಾನುಭವಿಗಳಲ್ಲಿ ಅನಕ್ಷರಸ್ಥರ ಸಂಖ್ಯೆಯೂ ಹೆಚ್ಚಾಗಿದೆ. ಗ್ರಾಮೀಣ ಪ್ರದೇಶದ ಜನರಿಗೆ ಶಿಕ್ಷಣದಲ್ಲಿ ಮೀಸಲಾತಿಗಳನ್ನು ಒದಗಿಸಿದ್ದರೂ ಪದವಿ ಮತ್ತು ಉನ್ನತ ಶಿಕ್ಷಣ ಪಡೆದ ಫಲಾನುಭವಿಗಳ ಸಂಖ್ಯೆಯು ಕಡಿಮೆ ಇದೆ.

### ಫಲಾನುಭವಿಗಳ ವೈವಾಹಿಕ ವಿವರಗಳು :

ಈ ಕೆಳಗಿನ ಕೋಷ್ಟಕದಲ್ಲಿ ಫಲಾನುಭವಿಗಳ ವೈವಾಹಿಕ ವಿವರಗಳ ಬಗ್ಗೆ ಮಾಹಿತಿಗಳನ್ನು ನೀಡಲಾಗಿದೆ.

**ಕೋಷ್ಟಕ ೪.೩ ಫಲಾನುಭವಿಗಳ ವೈವಾಹಿಕ ವಿವರಗಳು**

| ಕ್ರ.ಸ | ವರ್ಗೀಕರಣ | ಫಲಾನುಭವಿಗಳ ಸಂಖ್ಯೆ | ಶೇಕಡವಾರು (%) |
|---|---|---|---|
| ೧ | ವಿವಾಹಿತರು | ೬೧ | ೬೧ |
| ೨ | ಅವಿವಾಹಿತರು | ೨೪ | ೨೪ |
| ೩ | ವಿಧವೆಯರು | ೧೧ | ೧೧ |
| ೪ | ವಿಧುರರು | ೧ | ೧ |
| ೫ | ವಿಚ್ಚೇಧಿತರು | ೩ | ೩ |
| | ಒಟ್ಟು | ೧೦೦ | ೧೦೦% |

ಮೂಲ : ಸಂಶೋಧಕರ ಕ್ಷೇತ್ರಕಾರ್ಯಾಧರಿತ ಮಾಹಿತಿ

ಮೇಲ್ಕಂಡ ಅಂಕಿ ಅಂಶಗಳನ್ನು ಗಮನಿಸಿದಾಗ ಪ್ರಸ್ತುತ ಅಧ್ಯಯನಕ್ಕೆ ಸೂಕ್ತವಾಗುವಂತೆ ವೈವಾಹಿಕ ವರ್ಗೀಕರಣದಲ್ಲಿ ವಿವಿದ ವಲಯದ ಸರ್ಕಾರೇತರ ಸಂಸ್ಥೆಗಳ ಫಲಾನುಭವಿಗಳನ್ನು ಪ್ರಶ್ನಾವಳಿಗೆ ಒಳಪಡಿಸಲಾಗಿದೆ. ಒಟ್ಟು ಫಲಾನುಭವಿಗಳಲ್ಲಿ ಶೇಕಡಾ ೬೧ ರಷ್ಟು ಫಲಾನುಭವಿಗಳು ವಿವಾಹಿತರಾಗಿರುತ್ತಾರೆ. ಶೇಕಡಾ ೨೪ ರಷ್ಟು ಫಲಾನುಭವಿಗಳು ಅವಿವಾಹಿತರು ಹಾಗೂ ಶೇಕಡಾ ೧೧ ರಷ್ಟು ಫಲಾನುಭವಿಗಳು ವಿಧವೆಯರಾಗಿದ್ದಾರೆ. ಶೇಕಡಾ ೧ ರಷ್ಟು ಫಲಾನುಭವಿಗಳು ವಿಧುರರಾಗಿದ್ದು ಮತ್ತು ಶೇಕಡಾ ೩ ರಷ್ಟು ಫಲಾನುಭವಿಗಳು ವಿಚ್ಛೇಧಿತರಾಗಿದ್ದಾರೆ.

ಈ ಅಂಕಿ ಅಂಶಗಳನ್ನು ಗಮನಿಸಿದಾಗ ಸರ್ಕಾರೇತರ ಸಂಸ್ಥೆಗಳ ಹೆಚ್ಚಿನ ಫಲಾನುಭವಿಗಳು ವಿವಾಹಿತರಾಗಿದ್ದು , ಅವಿವಾಹಿತರೂ ಹೆಚ್ಚಿನ ಸಂಖ್ಯೆಯಲ್ಲಿ ಸರ್ಕಾರೇತರ ಸಂಸ್ಥೆಗಳ ಸದಸ್ಯರಾಗಿದ್ದಾರೆ.

## ೪.೧ ಫಲಾನುಭವಿಗಳ ಸಾಮಾಜಿಕ ಮತ್ತು ಆರ್ಥಿಕ ಬದಲಾವಣೆಗಳ ವಿಶ್ಲೇಷಣೆ:

ಸರ್ಕಾರೇತರ ಸಂಸ್ಥೆಗಳು ಗ್ರಾಮೀಣ ಪ್ರದೇಶದ ಜನರ ಸಾಮಾಜಿಕ, ಆರ್ಥಿಕ ಮತ್ತು ವಯಕ್ತಿಕ ಬದಲಾವಣೆಗಳಲ್ಲಿ ಹೆಚ್ಚಿನ ಪಾತ್ರವಹಿಸುತ್ತವೆ. ಸರ್ಕಾರೇತರ ಸಂಸ್ಥೆಗಳು ವಿವಿಧ ರೀತಿಯ ಗ್ರಾಮೀಣ ಅಭಿವೃದ್ಧಿ ಯೋಜನೆಗಳ ಮೂಲಕ ಜನರಿಗೆ ಸರ್ಕಾರೇತರ ಸಂಸ್ಥೆಗಳ ಪ್ರಾಮುಖ್ಯತೆಯ ಬಗ್ಗೆ ಅರಿವನ್ನು ಮೂಡಿಸಿ ಜನರು ಅವುಗಳ ಪ್ರಯೋಜನಗಳನ್ನು ಪಡೆಯಲು ಪ್ರೋತ್ಸಾಹಿಸುತ್ತಿದೆ. ಈ ಕೆಳಗಿನ ಕೋಷ್ಟಕಗಳಲ್ಲಿ ಫಲಾನುಭವಿಗಳು ಸರ್ಕಾರೇತರ ಸಂಸ್ಥೆಗಳನ್ನು ಸೇರಲು ಪ್ರೇರಣೆ ನೀಡಿದವರ ವಿವರಗಳನ್ನು ನೀಡಲಾಗಿದೆ.

**ಕೋಷ್ಟಕ ೪.೪ ಫಲಾನುಭವಿಗಳು ಸರ್ಕಾರೇತರ ಸಂಸ್ಥೆಗಳನ್ನು ಸೇರಲು ಪ್ರೇರಣೆ ನೀಡಿದವರ ವಿವರ**

| ಕ್ರ .ಸ | ಪ್ರೇರಣೆ ನೀಡಿದವರು | ಫಲಾನುಭವಿಗಳ ಸಂಖ್ಯೆ | ಶೇಕಡವಾರು (%) |
|---|---|---|---|
| ೧ | ವಯಕ್ತಿಕ ಆಸಕ್ತಿ | ೨೨ | ೨೨ |
| ೨ | ಮಿತ್ರರು | ೧೩ | ೧೩ |
| ೩ | ಕುಟುಂಬ ಸದಸ್ಯರು | ೧೯ | ೧೯ |
| ೪ | ಎನ್.ಜಿ.ಒ ಸಿಬ್ಬಂಧಿಗಳು | ೪೧ | ೪೧ |
| ೫ | ಇತರೆ | ೫ | ೫ |
| | ಒಟ್ಟು | ೧೦೦ | ೧೦೦% |

ಮೂಲ : ಸಂಶೋಧಕರ ಕ್ಷೇತ್ರಕಾರ್ಯಾಧರಿತ ಮಾಹಿತಿ

**ಫಲಾನುಭವಿಗಳು ಸರ್ಕಾರೇತರ ಸಂಸ್ಥೆಗಳನ್ನು ಸೇರಲು ಪ್ರೇರಣೆ ನೀಡಿದವರ ವಿವರಗಳು**




**ರೇಖಾ ನಕ್ಷೆ ೪.೨ ಮೂಲ : ಸಂಶೋಧಕರ ಕ್ಷೇತ್ರಕಾರ್ಯಾಧರಿತ ಮಾಹಿತಿ**

ಈ ಮೇಲಿನ ಕೋಷ್ಟಕದಲ್ಲಿ ಫಲಾನುಭವಿಗಳು ಸರ್ಕಾರೇತರ ಸಂಸ್ಥೆಗಳ ಸದಸ್ಯರಾಗಲು ಪ್ರೇರಣೆ ನೀಡಿದವರ ವಿವರಗಳನ್ನು ನೀಡಲಾಗಿದೆ. ಶೇಕಡಾ ೪೧ ರಷ್ಟು ಫಲಾನುಭವಿಗಳು ಸರ್ಕಾರೇತರ ಸಂಸ್ಥೆಗಳ ಸಿಬ್ಬಂಧಿಗಳ ಪ್ರೇರಣೆಯ ಮೇರೆಗೆ ಸಂಸ್ಥೆಯ ಸದಸ್ಯರಾಗಿದ್ದಾರೆ. ಶೇಕಡಾ ೨೨ ರಷ್ಟು ಫಲಾನುಭವಿಗಳು ವಯಕ್ತಿಕ ಆಸಕ್ತಿಯಿಂದ ಹಾಗೂ ಶೇಕಡಾ ೧೩ ರಷ್ಟು ಫಲಾನುಭವಿಗಳು ಮಿತ್ರರ ಪ್ರೇರಣೆಯಿಂದ ಸರ್ಕಾರೇತರ ಸಂಸ್ಥೆಗಳ ಫಲಾನುಭವಿಗಳಾಗಿದ್ದಾರೆ. ಶೇಕಡಾ ೧೯ ರಷ್ಟು ಫಲಾನುಭವಿಗಳು ತಮ್ಮ ಕುಟುಂಬ ಸದಸ್ಯರ ಪ್ರೇರಣೆಯಿಂದ ಮತ್ತು ಶೇಕಡಾ ೫ ರಷ್ಟು ಫಲಾನುಭವಿಗಳು ಇತರ ಮೂಲಗಳ ಮೂಲಕ ಪ್ರೇರಣೆಯನ್ನು ಪಡೆದು ಸರ್ಕಾರೇತರ ಸಂಸ್ಥೆಗಳ ಸದಸ್ಯರಾಗಿದ್ದಾರೆ.

ಈ ಮೇಲಿನ ಅಂಕಿ ಅಂಶಗಳನ್ನು ಗಮನಿಸಿದಾಗ ಸರ್ಕಾರೇತರ ಸಂಸ್ಥೆಗಳ ಹೆಚ್ಚಿನ ಫಲಾನುಭವಿಗಳು ವಯಕ್ತಿಕ ಆಸಕ್ತಿ ಮತ್ತು ಸರ್ಕಾರೇತರ ಸಂಸ್ಥೆಗಳ ಸಿಬ್ಬಂಧಿಗಳ ಪ್ರೇರಣೆಯ ಮೇರೆಗೆ ಸದಸ್ಯರಾಗಿರುವುದು ಕಂಡುಬರುತ್ತದೆ.

## ಫಲಾನುಭವಿಗಳು ಸರ್ಕಾರೇತರ ಸಂಸ್ಥೆಗಳ ಸದಸ್ಯರಾಗಿರುವ ಹಿಂದಿನ ಉದ್ದೇಶಗಳು

**ಕೋಷ್ಟಕ ೪.೫ ಫಲಾನುಭವಿಗಳು ಸರ್ಕಾರೇತರ ಸಂಸ್ಥೆಗಳ ಸದಸ್ಯರಾಗಿರುವ ಉದ್ದೇಶಗಳ ವಿವರಗಳು**

| ಕ್ರ.ಸ | ಉದ್ದೇಶಗಳು | ಫಲಾನುಭವಿಗಳ ಸಂಖ್ಯೆ | ಶೇಕಡವಾರು (%) |
|---|---|---|---|
| ೧ | ಉಳಿತಾಯ ಮಾಡಲು | ೫೬ | ೫೬ |
| ೨ | ವ್ಯಕ್ತಿತ್ವ ವಿಕಸನ | ೧೫ | ೧೫ |
| ೩ | ಬಿಡುವಿನ ಸಮಯವನ್ನು ಕಳೆಯಲು | ೭ | ೭ |
| ೪ | ಸಾಲವನ್ನು ಪಡೆಯಲು | ೧೮ | ೧೮ |
| ೫ | ಇತರೆ | ೪ | ೪ |
| | ಒಟ್ಟು | ೧೦೦ | ೧೦೦ % |

ಮೂಲ : ಸಂಶೋಧಕರ ಕ್ಷೇತ್ರಕಾರ್ಯಾಧರಿತ ಮಾಹಿತಿ

**ಫಲಾನುಭವಿಗಳು ಸರ್ಕಾರೇತರ ಸಂಸ್ಥೆಗಳ ಸದಸ್ಯರಾಗಿರುವ ಉದ್ದೇಶಗಳ ವಿವರಗಳು**




**ರೇಖಾ ನಕ್ಷೆ ೪.೩ ಮೂಲ : ಸಂಶೋಧಕರ ಕ್ಷೇತ್ರಕಾರ್ಯಾಧರಿತ ಮಾಹಿತಿ**

ಈ ಮೇಲಿನ ಕೋಷ್ಟಕದಲ್ಲಿ ಫಲಾನುಭವಿಗಳು ಸರ್ಕಾರೇತರ ಸಂಸ್ಥೆಗಳ ಸದಸ್ಯರಾಗಿರುವ ಉದ್ದೇಶಗಳ ವಿವರಗಳನ್ನು ನೀಡಲಾಗಿದೆ. ಶೇಕಡಾ ೫೬ ರಷ್ಟು ಫಲಾನುಭವಿಗಳು ಉಳಿತಾಯ

ಮಾಡುವ ಉದ್ದೇಶದಿಂದ ಸರ್ಕಾರೇತರ ಸಂಸ್ಥೆಗಳ ಸದಸ್ಯರಾಗಿದ್ದಾರೆ. ಶೇಕಡಾ ೧೮ ರಷ್ಟು ಫಲಾನುಭವಿಗಳು ಸಾಲವನ್ನು ಪಡೆಯುವ ಉದ್ದೇಶದಿಂದ ಸರ್ಕಾರೇತರ ಸಂಸ್ಥೆಗಳ ಸದಸ್ಯರಾಗಿದ್ದಾರೆ. ಅದೇ ರೀತಿ ಶೇಕಡಾ ೧೫ ರಷ್ಟು ಫಲಾನುಭವಿಗಳು ವ್ಯಕ್ತಿತ್ವ ವಿಕಸನದ ದೃಷ್ಟಿಯಿಂದ ಸರ್ಕಾರೇತರ ಸಂಸ್ಥೆಗಳ ಫಲಾನುಭವಿಗಳಾಗಿದ್ದಾರೆ. ಶೇಕಡಾ ೭ ರಷ್ಟು ಫಲಾನುಭವಿಗಳು ತಮ್ಮ ಬಿಡುವಿನ ಸಮಯವನ್ನು ಕಳೆಯಲು ಮತ್ತು ಶೇಕಡಾ ೪ ರಷ್ಟು ಫಲಾನುಭವಿಗಳು ಇತರ ಬೇರೆ ಉದ್ದೇಶಗಳನ್ನು ಹೊಂದಿಕೊಂಡು ಸರ್ಕಾರೇತರ ಸಂಸ್ಥೆಗಳ ಫಲಾನುಭವಿಗಳಾಗಿದ್ದಾರೆ.

ಈ ಮೇಲಿನ ಅಂಕಿ ಅಂಶಗಳನ್ನು ಗಮನಿಸಿದಾಗ ಸರ್ಕಾರೇತರ ಸಂಸ್ಥೆಗಳ ಹೆಚ್ಚಿನ ಫಲಾನುಭವಿಗಳು ಉಳಿತಾಯ ಮಾಡುವ ಮತ್ತು ಸಾಲವನ್ನು ಪಡೆಯುವ ಉದ್ದೇಶಗಳಿಂದ ಸರ್ಕಾರೇತರ ಸಂಸ್ಥೆಗಳ ಸದಸ್ಯರಾಗಿದ್ದಾರೆ.

## ಫಲಾನುಭವಿಗಳು ಹೊಂದಿರುವ ಉಳಿತಾಯ ಖಾತೆಗಳ ವಿವರಗಳು

**ಕೋಷ್ಟಕ ೪.೬ ಫಲಾನುಭವಿಗಳು ಹೊಂದಿರುವ ಉಳಿತಾಯ ಖಾತೆಗಳ ವಿವರಗಳು**

| ಕ್ರ.ಸ | ಸಂಸ್ಥೆಗಳು | ಫಲಾನುಭವಿಗಳ ಸಂಖ್ಯೆ | ಶೇಕಡವಾರು |
|---|---|---|---|
| ೧ | ಬ್ಯಾಂಕುಗಳು | ೯೮ | ೮೩.೭೬ |
| ೨ | ಸರ್ಕಾರೇತರ ಸಂಸ್ಥೆಗಳು | ೨ | ೧.೭೧ |
| ೩ | ಅಂಚೆ ಕಛೇರಿಗಳು | ೧೨ | ೧೦.೨೬ |
| ೪ | ಇತರೆ | ೫ | ೪.೨೭ |
| | ಒಟ್ಟು | ೧೧೭ | ೧೦೦ % |

ಮೂಲ : ಸಂಶೋಧಕರ ಕ್ಷೇತ್ರಕಾರ್ಯಾಧರಿತ ಮಾಹಿತಿ

**ಫಲಾನುಭವಿಗಳು ಹೊಂದಿರುವ ಉಳಿತಾಯ ಖಾತೆಗಳ ವಿವರಗಳು**




ರೇಖಾ ನಕ್ಷೆ ೪.೪ ಮೂಲ : ಸಂಶೋಧಕರ ಕ್ಷೇತ್ರಕಾರ್ಯಾಧರಿತ ಮಾಹಿತಿ

ಈ ಮೇಲಿನ ಕೋಷ್ಟಕದಲ್ಲಿ ಫಲಾನುಭವಿಗಳು ಹೊಂದಿರುವ ಉಳಿತಾಯ ಖಾತೆಗಳ ವಿವರಗಳನ್ನು ನೀಡಲಾಗಿದೆ. ಶೇಕಡಾ ೮೩.೭೬ ರಷ್ಟು ಫಲಾನುಭವಿಗಳು ಬ್ಯಾಂಕುಗಳಲ್ಲಿ ತಮ್ಮ ಉಳಿತಾಯ ಖಾತೆಗಳನ್ನು ಹೊಂದಿದವರಾಗಿದ್ದಾರೆ. ಶೇಕಡಾ ೧೦.೨೬ ರಷ್ಟು ಫಲಾನುಭವಿಗಳು ಅಂಚೆ ಕಛೇರಿಗಳಲ್ಲಿ ತಮ್ಮ ಉಳಿತಾಯ ಖಾತೆಗಳನ್ನು ಹೊಂದಿದ್ದರೆ, ಶೇಕಡಾ ೪.೨೭ ರಷ್ಟು ಫಲಾನುಭವಿಗಳು ಇತರ ಉಳಿತಾಯ ಸಂಸ್ಥೆಗಳಲ್ಲಿ ತಮ್ಮ ಉಳಿತಾಯ ಖಾತೆಗಳನ್ನು ಹೊಂದಿದ್ದಾರೆ. ಶೇಕಡಾ ೪.೨೭ ರಷ್ಟು ಫಲಾನುಭವಿಗಳು ಸರ್ಕಾರೇತರ ಸಂಸ್ಥೆಗಳಲ್ಲಿಯೇ ತಮ್ಮ ಉಳಿತಾಯವನ್ನು ಮಾಡುತ್ತಿದ್ದಾರೆ.

ಈ ಮೇಲಿನ ಅಂಕಿ ಅಂಶಗಳನ್ನು ಗಮನಿಸಿದಾಗ ಅತೀ ಹೆಚ್ಚು ಫಲಾನುಭವಿಗಳು ಬ್ಯಾಂಕುಗಳಲ್ಲಿ ತಮ್ಮ ಉಳಿತಾಯ ಖಾತೆಗಳನ್ನು ಹೊಂದಿದವರಾಗಿದ್ದಾರೆ. ಅದೇ ರೀತಿ ಕೆಲವು ಫಲಾನುಭವಿಗಳು ಒಂದಕ್ಕಿಂತ ಹೆಚ್ಚು ಉಳಿತಾಯ ಸಂಸ್ಥೆಗಳಲ್ಲಿ ಉಳಿತಾಯ ಖಾತೆಗಳನ್ನು ಹೊಂದಿದವರಾಗಿದ್ದಾರೆ. ಇದರಿಂದ ನಮಗೆ ತಿಳಿಯುವುದೇನೆಂದರೆ ಸರ್ಕಾರೇತರ ಸಂಸ್ಥೆಗಳು ಫಲಾನುಭವಿಗಳಲ್ಲಿ ಉಳಿತಾಯದ ಪ್ರವೃತ್ತಿಯನ್ನು ಅಭಿವೃದ್ಧಿ ಪಡಿಸಲು ಯಶಸ್ವಿಯಾಗಿದೆ. ಫಲಾನುಭವಿಗಳು ಆರ್ಥಿಕವಾಗಿ ಮತ್ತು ಸಾಮಾಜಿಕವಾಗಿ ಅಭಿವೃದ್ಧಿ ಹೊಂದುವುದನ್ನು ನಾವು ಇಲ್ಲಿ ಗುರುತಿಸಬಹುದು.

## ೪.೨ ಸರ್ಕಾರೇತರ ಸಂಸ್ಥೆಗಳು ಹಮ್ಮಿಕೊಂಡಿರುವ ಸ್ವ-ಉದ್ಯೋಗದ ಕಾರ್ಯಕ್ರಮಗಳು

ಸರ್ಕಾರೇತರ ಸಂಸ್ಥೆಗಳು ಸ್ವ ಉದ್ಯೋಗವನ್ನು ಸೃಷ್ಟಿಸುವಲ್ಲಿ ಪ್ರಮುಖ ಪಾತ್ರವಹಿಸುತ್ತವೆ. ಸರ್ಕಾರೇತರ ಸಂಸ್ಥೆಗಳು ವಿವಿಧ ರೀತಿಯ ವೃತ್ತಿ ತರಬೇತಿಗಳನ್ನು ನಡೆಸಿ ಜನರಿಗೆ ತರಬೇತಿಯನ್ನು ನೀಡಿ ಜನರನ್ನು ಸ್ವಾವಲಂಬಿಗಳನ್ನಾಗಿ ಮಾಡುತ್ತಿದೆ. ಜನರು ತಮ್ಮದೇ ಆದ ಸ್ವಂತ ಉದ್ಯೋಗಗಳನ್ನು ಪ್ರಾರಂಭಿಸಿ ತಮ್ಮ ಜೀವನ ಮಟ್ಟದಲ್ಲಿ ಸುಧಾರಣೆಯನ್ನು ಕಂಡಿದ್ದಾರೆ. ಸರಕಾರೇತ ಸಂಸ್ಥೆಗಳು ಅನೇಕ ಮಾಹಿತಿ ಮತ್ತು ತರಬೇತಿ ಸಂಸ್ಥೆಗಳನ್ನು ಸ್ಥಾಪಿಸಿ ಗ್ರಾಮೀಣ ಪ್ರದೇಶದ ಜನರಿಗೆ ಅತೀ ಕಡಿಮೆ ಬಂಡವಾಳವನ್ನು ಉಪಯೋಗಿಸಿ ಸ್ವಂತ ಉದ್ಯೋಗಗಳನ್ನು ಪ್ರಾರಂಭಿಸಲು ತರಬೇತಿಯನ್ನು ನೀಡುತ್ತವೆ. ಇದರಿಂದ ಗ್ರಾಮೀಣ ಪ್ರದೇಶದ ನಿರುದ್ಯೋಗ ಸಮಸ್ಯೆಯನ್ನು ಹೋಗಲಾಡಿಸಿ ಉತ್ತಮ ಲಾಭವನ್ನು ಗಳಿಸಲು ಸಹಾಯವಾಗುತ್ತದೆ.

ಈ ಕೆಳಗಿನ ಕೋಷ್ಟಗಳಲ್ಲಿ ಸರ್ಕಾರೇತರ ಸಂಸ್ಥೆಗಳು ನೀಡುವ ಸ್ವ-ಉದ್ಯೋಗಳನ್ನು ನಡೆಸಲು ನೀಡುವ ಸಹಾಯದ ವಿವರಗಳನ್ನು ನೀಡಲಾಗಿದೆ.

## ಕೋಷ್ಟಕ ೪.೭ ಫಲಾನುಭವಿಗಳು ನಡೆಸುವ ಸ್ವ-ಉದ್ಯೋಗದ ವಿವರಗಳು

| ಕ್ರ .ಸ | ಸ್ವ-ಉದ್ಯೋಗಗಳು | ಪುರುಷರು | ಶೇಕಡ(%) | ಮಹಿಳೆಯರು | ಶೇಕಡ(%) | ಒಟ್ಟು | ಶೇಕಡ(%) |
|---|---|---|---|---|---|---|---|
| ೧ | ಕಿರು ಉದ್ಯಮ | ೬ | ೧೬.೬೭ | ೧೨ | ೩೦ | ೧೮ | ೨೩.೬೮ |
| ೨ | ಟೈಲರಿಂಗ್ | ೯ | ೨೫ | ೪ | ೧೦ | ೧೩ | ೧೭.೧೧ |
| ೩ | ಪಶು ಸಾಕಣೆ ಮತ್ತು ಹಾಲಿನ ಉತ್ಪಾದನೆ | ೭ | ೧೯.೪೪ | ೧೦ | ೨೫ | ೧೭ | ೨೨.೩೭ |
| ೪ | ಮೀನು ಮಾರಾಟ | ೫ | ೧೩.೮೯ | ೨ | ೫ | ೭ | ೯.೨೧ |
| ೫ | ಮಡಕೆ ಮಾಡುವುದು | ೦ | ೦೦ | ೪ | ೧೦ | ೪ | ೫.೨೬ |
| ೬ | ತರಕಾರಿ ಮಾರಾಟ | ೬ | ೧೬.೬೬ | ೪ | ೧೦ | ೧೦ | ೧೩.೧೬ |
| ೭ | ಬಟ್ಟೆ/ಜವುಳಿ ಮಾರಾಟ | ೧ | ೨.೭೮ | ೩ | ೭.೫ | ೪ | ೫.೨೬ |
| ೮ | ಇತರೆ | ೨ | ೫.೫೬ | ೧ | ೨.೫ | ೩ | ೩.೯೫ |
| ಒಟ್ಟು | | ೩೬ | ೧೦೦% | ೪೦ | ೧೦೦% | ೭೬ | ೧೦೦% |

ಮೂಲ : ಸಂಶೋಧಕರ ಕ್ಷೇತ್ರಕಾರ್ಯಾಧರಿತ ಮಾಹಿತಿ

### ಫಲಾನುಭವಿಗಳು ನಡೆಸುವ ಸ್ವ-ಉದ್ಯೋಗದ ವಿವರಗಳು




ರೇಖಾ ನಕ್ಷೆ ೪.೫ ಮೂಲ : ಸಂಶೋಧಕರ ಕ್ಷೇತ್ರಕಾರ್ಯಾಧರಿತ ಮಾಹಿತಿ

ಈ ಮೇಲಿನ ಕೋಷ್ಟಕದಲ್ಲಿ ಫಲಾನುಭವಿಗಳು ನಡೆಸುವ ಸ್ವ-ಉದ್ಯೋಗಗಳ ವಿವರಗಳನ್ನು ನೀಡಲಾಗಿದೆ. ಶೇಕಡಾ ೨೩.೩೮ ರಷ್ಟು ಫಲಾನುಭವಿಗಳು ಸರ್ಕಾರೇತರ ಸಂಸ್ಥೆಗಳು ಒದಗಿಸಿರುವ ಕಿರು ಉದ್ಯಮದ ಸಹಾಯವನ್ನು ಪಡೆದಿದ್ದಾರೆ. ಇದರಲ್ಲಿ ಶೇಕಡಾ ೧೩.೩೭ ರಷ್ಟು ಮಹಿಳೆಯರು ಮತ್ತು ಶೇಕಡಾ ೩೦ ರಷ್ಟು ಪುರುಷರಿದ್ದಾರೆ. ಶೇಕಡಾ ೧೭.೧೧ ರಷ್ಟು ಫಲಾನುಭವಿಗಳು ಟೈಲರಿಂಗ್ ಕೆಲಸವನ್ನು ತಮ್ಮ ಸ್ವ-ಉದ್ಯೋಗವನ್ನಾಗಿ ನಡೆಸಲು ಸರ್ಕಾರೇತರ ಸಂಸ್ಥೆಗಳಿಂದ ಸಹಾಯವನ್ನು ಪಡೆದಿದ್ದಾರೆ. ಇದರಲ್ಲಿ ಶೇಕಡಾ ೨೫ ರಷ್ಟು ಮಹಿಳೆಯರು ಮತ್ತು ಶೇಕಡಾ ೧೦ ರಷ್ಟು ಪುರುಷರಿದ್ದಾರೆ. ಅದೇ ರೀತಿ ಶೇಕಡಾ ೨೨.೩೭ ರಷ್ಟು ಫಲಾನುಭವಿಗಳು ಪಶು ಸಾಕಣೆ ಮತ್ತು ಹಾಲಿನ ಉತ್ಪಾದನೆಯ ಸ್ವ-ಉದ್ಯೋಗ ನಡೆಸುತ್ತಿದ್ದಾರೆ ಇದರಲ್ಲಿ ಶೇಕಡಾ ೧೯.೪೪ ರಷ್ಟು ಮಹಿಳೆಯರು ಮತ್ತು ಶೇಕಡಾ ೨೫ ರಷ್ಟು ಪುರುಷರಿದ್ದಾರೆ. ಶೇಕಡಾ ೯.೨೧ ರಷ್ಟು ಫಲಾನುಭವಿಗಳು ಮೀನು ಮಾರಾಟದ ಉದ್ಯೋಗಗಳಲ್ಲಿ ತಮ್ಮನ್ನು ತಾವು ತೊಡಗಿಸಿಕೊಂಡಿದ್ದಾರೆ. ಶೇಕಡಾ ೫.೨೬ ರಷ್ಟು ಫಲಾನುಭವಿಗಳು ಮಡಕೆಗಳನ್ನು ಮಾಡುವ ಉದ್ಯೋಗಗಳನ್ನು ನಡೆಸಲು ಸರ್ಕಾರೇತರ ಸಂಸ್ಥೆಗಳಿಂದ ಸಹಾಯವನ್ನು ಪಡೆದಿದ್ದಾರೆ. ಶೇಕಡಾ ೧೩.೧೬ ರಷ್ಟು ಫಲಾನುಭವಿಗಳು ತರಕಾರಿ ಮಾರಾಟ ಮಾಡುವ ಸ್ವ-ಉದ್ಯೋಗಗಳನ್ನು ನಡೆಸಲು ಸರ್ಕಾರೇತರ ಸಂಸ್ಥೆಗಳಿಂದ ಸಹಾಯವನ್ನು ಪಡೆದಿದ್ದಾರೆ. ಅದೇ ರೀತಿ . ಶೇಕಡಾ ೫.೨೬ ರಷ್ಟು ಫಲಾನುಭವಿಗಳು ಬಟ್ಟೆ/ಜವುಳಿ ಮಾರಾಟ ಕೇಂದ್ರಗಳನ್ನು ನಡೆಸಲು ಸರ್ಕಾರೇತರ ಸಂಸ್ಥೆಗಳಿಂದ ಸಹಾಯವನ್ನು ಪಡೆದಿದ್ದಾರೆ. ಹಾಗೂ ಶೇಕಡಾ ೩.೯೫ ರಷ್ಟು ಫಲಾನುಭವಿಗಳಿಗೆ ಇತರ ಸ್ವ-ಉದ್ಯೋಗವಕಾಶಗಳನ್ನು ನಡೆಸಲು ಸರ್ಕಾರೇತರ ಸಂಸ್ಥೆಗಳಿಂದ ಸಹಾಯ ದೊರೆತಿದೆ.

ಈ ಮೇಲಿನ ಅಂಕಿ ಅಂಶಗಳಿಂದ ತಿಳಿಯುವುದೇನೆಂದರೆ ಸರ್ಕಾರೇತರ ಸಂಸ್ಥೆಗಳು ಅನೇಕ ರೀತಿಯ ಸ್ವ-ಉದ್ಯೋಗವಕಾಶಗಳನ್ನು ಗ್ರಾಮೀಣ ಪ್ರದೇಶದ ಜನರಿಗೆ ಒದಗಿಸಿ ಕೊಟ್ಟಿದೆ. ಈ ಅಂಕಿ ಅಂಶಗಳ ಪ್ರಕಾರ ಸರ್ಕಾರೇತರ ಸಂಸ್ಥೆಗಳ ಫಲಾನುಭವಿಗಳು ಅತೀ ಹೆಚ್ಚಿನ ಸಂಖ್ಯೆಯಲ್ಲಿ ಕಿರು ಉದ್ಯಮಗಳನ್ನು ನಡೆಸುತ್ತಿದ್ದಾರೆ. ಅದೇ ರೀತಿ ಟೈಲರಿಂಗ್ ಮತ್ತು ಪಶು ಸಾಕಣೆ, ಹಾಲಿನ ಉತ್ಪಾದನೆಯ ಸ್ವ-ಉದ್ಯೋಗಗಳನ್ನು ಸಹಾ ಫಲಾನುಭವಿಗಳು ಹೆಚ್ಚಿನ ಸಂಖ್ಯೆಯಲ್ಲಿ ನಡೆಸುತ್ತಿರುವುದು ಕಂಡುಬರುತ್ತದೆ. ಆದರೆ ಸ್ವ-ಉದ್ಯೋಗಗಳಲ್ಲಿ ಮಹಿಳೆಯರ ಪಾಲ್ಗೊಳ್ಳುವಿಕೆ ಪುರುಷರಿಗಿಂತ ಕಡಿಮೆಯಾಗಿರುವುದನ್ನು ಗಮನಿಸಬಹುದು.

## ೪.೩ ಸರ್ಕಾರೇತರ ಸಂಸ್ಥೆಗಳು ಹಮ್ಮಿಕೊಂಡಿರುವ ಶೈಕ್ಷಣಿಕ ಕಾರ್ಯಕ್ರಮಗಳು

ಒಂದು ದೇಶ ಆದರ್ಶ ಹಾಗೂ ಸುಖೀ ರಾಜ್ಯವಾಗಬೇಕಾದರೆ ಪ್ರತಿಯೊಬ್ಬ ವ್ಯಕ್ತಿಗೂ ಶಿಕ್ಷಣ ದೊರೆತು ತಾನು ತನ್ನ ಸ್ವಂತ ದುಡಿಮೆಯಲ್ಲಿ ತೊಡಗುವಂತಾಗಬೇಕು. ಪ್ರತಿಯೊಬ್ಬ ವ್ಯಕ್ತಿಯೂ ಕೂಡಾ ಸಾಮಾಜಿಕ ಪ್ರಜ್ಞೆಯನ್ನು ಹೊಂದಿರಬೇಕು. ಸಮುದಾಯ ಅಭಿವೃದ್ಧಿ ಬಗ್ಗೆ ಸಮಾಜದಲ್ಲಿನ ಆರ್ಥಿಕ ಸ್ಥಿತಿಗತಿಗಳ ಬಗ್ಗೆ ಬದಲಾಗುತ್ತಿರುವ ರೀತಿ ನೀತಿಗಳ ಬಗ್ಗೆ ತನ್ನ ಕುಟುಂಬದ ಭವಿಷ್ಯದ ಅಭಿವೃದ್ಧಿ ಬಗ್ಗೆ ಗುರಿ ಹಾಗೂ ಖಚಿತವಾದ ಕಲ್ಪನೆ ಇರಬೇಕಾಗುತ್ತದೆ. ಇದು ಶಿಕ್ಷಣ ಪಡೆಯುವುದರಿಂದ ಮಾತ್ರ ಸಾಧ್ಯವಾಗುತ್ತದೆ.

ಗ್ರಾಮೀಣ ಪ್ರದೇಶಗಳಲ್ಲಿ ಜಾಗೃತಿ ಮೂಡಿಸಲು ಸಾಕ್ಷರತೆ, ಉಪಯುಕ್ತವಾಗಿದೆ. ಆದರೆ ಕೇವಲ ಸಾಕ್ಷರತೆ ಅಥವಾ ಕ್ರಿಯಾತ್ಮಕ ಸಾಕ್ಷರತೆಯಿಂದ ಮಾತ್ರ ಈ ಜನಸ್ತೋಮವನ್ನು ಬೆಳವಣಿಗೆಯಲ್ಲಿ ಸಕ್ರಿಯ ಪಾಲುದಾರರನ್ನಾಗಿಸುವುದು ಸಾಧ್ಯವಿಲ್ಲ ಹಾಗಾಗಿ ವಯಸ್ಕರ ಶಿಕ್ಷಣದ ಕೇಂದ್ರದ ಕಡೆಗೂ ಗಮನ ಹರಿಸಬೇಕು ಆಗ ಮಾತ್ರ ಗ್ರಾಮೀಣ ಜನರ ನೈಜಪ್ರಗತಿ ಸಾಧ್ಯ. ಸರ್ಕಾರೇತರ ಸಂಸ್ಥೆಗಳು ಗ್ರಾಮೀಣ ಶಿಕ್ಷಣಕ್ಕೆ ಹೆಚ್ಚಿನ ಪ್ರೋತ್ಸಾಹವನ್ನು ನೀಡುತ್ತಿವೆ. ಈ ಕೆಳಗಿನ ಕೋಷ್ಟಕಗಳಲ್ಲಿ ಸರ್ಕಾರೇತರ ಸಂಸ್ಥೆಗಳು ನೀಡುವ ಶೈಕ್ಷಣಿಕ ಸಹಾಯದ ವಿವರಗಳನ್ನು ನೀಡಲಾಗಿದೆ.

### ಸರ್ಕಾರೇತರ ಸಂಸ್ಥೆಗಳು ನೀಡುವ ಶೈಕ್ಷಣಿಕ ಸಹಾಯಗಳು :

**ಕೋಷ್ಟಕ ೪.೮ ಸರ್ಕಾರೇತರ ಸಂಸ್ಥೆಗಳು ನೀಡುವ ಶೈಕ್ಷಣಿಕ ಸಹಾಯದ ವಿವರಗಳು**

| ಕ್ರ .ಸ | ಶೈಕ್ಷಣಿಕ ಸಹಾಯದ ವಿಧಗಳು | ಫಲಾನುಭವಿಗಳ ಸಂಖ್ಯೆ | ಶೇಕಡವಾರು |
|---|---|---|---|
| ೧ | ಉಚಿತ ಶಿಕ್ಷಣ ನೀಡುವುದು | ೧೫ | ೩೨.೬೧ |
| ೨ | ಶಾಲಾ ಶುಲ್ಕ ನೀಡುವುದು | ೯ | ೧೯.೫೬ |
| ೩ | ವಿಧ್ಯಾರ್ಥಿ ವೇತನ ನೀಡುವುದು | ೧೩ | ೨೮.೨೬ |
| ೪ | ಸಮವಸ್ತ್ರಗಳನ್ನು ನೀಡುವುದು | ೩ | ೬.೫೨ |
| ೫ | ಪುಸ್ತಕಗಳನ್ನು ನೀಡುವುದು | ೪ | ೮.೭೦ |
| ೬ | ಇತರೆ | ೨ | ೪.೩೪ |
| | ಒಟ್ಟು | ೪೬ | ೧೦೦ % |

ಮೂಲ : ಸಂಶೋಧಕರ ಕ್ಷೇತ್ರಕಾರ್ಯಾಧರಿತ ಮಾಹಿತಿ

ಈ ಮೇಲಿನ ಕೋಷ್ಟಕದಲ್ಲಿ ಸರ್ಕಾರೇತರ ಸಂಸ್ಥೆಗಳು ನೀಡುವ ಶಿಕ್ಷಣದ ಸಹಾಯಗಳ ಬಗ್ಗೆ ವಿವರಗಳನ್ನು ನೀಡಲಾಗಿದೆ. ಶೇಕಡಾ ೩೨.೬೧ ರಷ್ಟು ಫಲಾನುಭವಿಗಳು ಸರ್ಕಾರೇತರ ಸಂಸ್ಥೆಗಳು ನೀಡುವ ಉಚಿತ ಶಿಕ್ಷಣಗಳನ್ನು ಪಡೆದಿದ್ದಾರೆ. ಶೇಕಡಾ ೨೮.೨೬ ರಷ್ಟು ಫಲಾನುಭವಿಗಳು ವಿದ್ಯಾರ್ಥಿ ವೇತನಗಳನ್ನು ಪಡೆದಿದ್ದಾರೆ. ಹಾಗೂ ಶೇಕಡಾ ೧೯.೫೭ ರಷ್ಟು ಫಲಾನುಭವಿಗಳ ಶಾಲಾ ಶುಲ್ಕಗಳನ್ನು ಸರ್ಕಾರೇತರ ಸಂಸ್ಥೆಗಳು ಭರಿಸುತ್ತಿವೆ. ಹಾಗೂ ಶೇಕಡಾ ೬.೫೨ ರಷ್ಟು ಫಲಾನುಭವಿಗಳ ಮಕ್ಕಳ ವಿದ್ಯಾಭ್ಯಾಸಕ್ಕಾಗಿ ಉಚಿತ ಸಮವಸ್ತ್ರಗಳನ್ನು ಸರ್ಕಾರೇತರ ಸಂಸ್ಥೆಗಳು ನೀಡುತ್ತಿವೆ. ಅದೇ ರೀತಿ ಶೇಕಡಾ ೮.20 ರಷ್ಟು ಉಚಿತ ಪುಸ್ತಕಗಳನ್ನು ಸರ್ಕಾರೇತರ ಸಂಸ್ಥೆಗಳು ಫಲಾನುಭವಿಗಳ ಮಕ್ಕಳ ವಿದ್ಯಾಭ್ಯಾಸಕ್ಕಾಗಿ ನೀಡುತ್ತಿವೆ. ಶೇಕಡಾ ೪.೩೪ ರಷ್ಟು ಫಲಾನುಭವಿಗಳು ಇತರ ಶೈಕ್ಷಣಿಕ ಸಹಾಯಗಳನ್ನು ಸರ್ಕಾರೇತರ ಸಂಸ್ಥೆಗಳಿಂದ ಪಡೆದಿದ್ದಾರೆ.

ಈ ಮೇಲಿನ ಅಂಕಿ ಅಂಶಗಳನ್ನು ಗಮನಿಸಿದಾಗ ಅತೀ ಹೆಚ್ಚಿನ ಫಲಾನುಭವಿಗಳು ಸರ್ಕಾರೇತರ ಸಂಸ್ಥೆಗಳಿಂದ ತಮ್ಮ ಮಕ್ಕಳ ವಿದ್ಯಾಭ್ಯಾಸಕ್ಕಾಗಿ ಸಹಾಯಗಳನ್ನು ಪಡೆಯುತ್ತಿದ್ದಾರೆ. ಸರ್ಕಾರೇತರ ಸಂಸ್ಥೆಗಳು ಉಚಿತ ಶಿಕ್ಷಣಗಳನ್ನು ನೀಡುವುದರಿಂದ ಗ್ರಾಮೀಣ ಪ್ರದೇಶಗಳಲ್ಲಿನ ಅನಕ್ಷರತೆ ಎಂಬ ಸಮಸ್ಯೆಗಳನ್ನು ಹೋಗಲಾಡಿಸಲು ಸಹಾಯಕವಾಗುತ್ತದೆ.

## ಸರ್ಕಾರೇತರ ಸಂಸ್ಥೆಗಳು ನೀಡುವ ಶಿಕ್ಷಣದ ಗುಣಮಟ್ಟ :

### ಕೋಷ್ಟಕ ೪.೯ ಸರ್ಕಾರೇತರ ಸಂಸ್ಥೆಗಳು ನೀಡುವ ಶಿಕ್ಷಣದ ಗುಣಮಟ್ಟದ ವಿವರಗಳು

| ಕ್ರ .ಸ | ಅಭಿಪ್ರಾಯಗಳು | ಫಲಾನುಭವಿಗಳ ಸಂಖ್ಯೆ | ಶೇಕಡವಾರು |
|---|---|---|---|
| ೧ | ಅತ್ಯುತ್ತಮವಾಗಿದೆ | ೦೮ | ೧೭.೩೯ |
| ೨ | ಉತ್ತಮವಾಗಿದೆ | ೨೦ | ೪೩.೪೮ |
| ೩ | ತೃಪ್ತಿಕರ | ೧೫ | ೩೨.೬೧ |
| ೪ | ಉತ್ತಮವಾಗಿಲ್ಲ | ೦೩ | ೬.೫೨ |
|  | ಒಟ್ಟು | ೪೬ | ೧೦೦ % |

ಮೂಲ : ಸಂಶೋಧಕರ ಕ್ಷೇತ್ರಕಾರ್ಯಾಧರಿತ ಮಾಹಿತಿ

## ಸರ್ಕಾರೇತರ ಸಂಸ್ಥೆಗಳು ನೀಡುವ ಶಿಕ್ಷಣದ ಗುಣಮಟ್ಟದ ವಿವರಗಳು




**ರೇಖಾ ನಕ್ಷೆ ೪.೬ ಮೂಲ : ಸಂಶೋಧಕರ ಕ್ಷೇತ್ರಕಾರ್ಯಾಧರಿತ ಮಾಹಿತಿ**

ಈ ಮೇಲಿನ ಕೋಷ್ಟಕದಲ್ಲಿ ಸರ್ಕಾರೇತರ ಸಂಸ್ಥೆಗಳ ಶಿಕ್ಷಣದ ಗುಣಮಟ್ಟದ ವಿವರಗಳನ್ನು ವಿಶ್ಲೇಷಿಸಲಾಗಿದೆ. ಈ ಮೇಲಿನ ಅಂಕಿ ಅಂಶಗಳ ಪ್ರಕಾರ ಶೇಕಡಾ ೧೭.೩೯ ರಷ್ಟು ಫಲಾನುಭವಿಗಳು ಸರ್ಕಾರೇತರ ಸಂಸ್ಥೆಗಳು ನೀಡುವ ಶಿಕ್ಷಣದ ಗುಣಮಟ್ಟವು ಅತ್ಯುತ್ತಮವಾಗಿದೆ ಎಂದು ಅಭಿಪ್ರಾಯಗಳನ್ನು ಹೊಂದಿದ್ದಾರೆ. ಅದೇ ರೀತಿ ಶೇಕಡಾ ೪೩.೪೮ ರಷ್ಟು ಫಲಾನುಭವಿಗಳು ಸರ್ಕಾರೇತರ ಸಂಸ್ಥೆಗಳ ಶೈಕ್ಷಣಿಕ ಗುಣಮಟ್ಟವು ಉತ್ತಮವಾಗಿದೆ ಎಂದು ತಮ್ಮ ನಿಲುವನ್ನು ನೀಡಿದ್ದಾರೆ. ಹಾಗೂ ಶೇಕಡಾ ೩೨.೬೧ ರಷ್ಟು ಫಲಾನುಭವಿಗಳು ಶಿಕ್ಷಣದ ಗುಣಮಟ್ಟ ತೃಪ್ತಿಕರ ಎಂಬ ಅಭಿಪ್ರಾಯಗಳನ್ನು ಹೊಂದಿದ್ದಾರೆ. ಶೇಕಡಾ ೬.೫೨ ರಷ್ಟು ಫಲಾನುಭವಿಗಳು ಶಿಕ್ಷಣದ ಗುಣಮಟ್ಟ ಉತ್ತಮವಾಗಿಲ್ಲ ಎಂಬ ಭಿಪ್ರಾಯಗಳನ್ನು ಹೊಂದಿದ್ದಾರೆ.

ಈ ಮೇಲಿನ ಅಂಕಿ ಅಂಶಗಳಿಂದ ತಿಳಿಯುವುದೇನೆಂದರೆ ಹೆಚ್ಚಿನ ಜನರು ಸರ್ಕಾರೇತರ ಸಂಸ್ಥೆಗಳ ಶೈಕ್ಷಣಿಕ ಸಹಾಯಗಳನ್ನು ಪಡೆಯುತ್ತಿದ್ದಾರೆ. ಹೆಚ್ಚಿನ ಫಲಾನುಭವಿಗಳು ಸರ್ಕಾರೇತರ ಸಂಸ್ಥೆಗಳು ನೀಡುವ ಶಿಕ್ಷಣದ ಗುಣಮಟ್ಟವು ಅತ್ಯುತ್ತಮ ಮತ್ತು ಉತ್ತಮವಾಗಿದೆ ಎಂಬ ಭಿಪ್ರಾಯಗಳನ್ನು ಹೊಂದಿದ್ದಾರೆ. ಇದರಿಂದ ಸರ್ಕಾರೇತರ ಸಂಸ್ಥೆಗಳು ಒದಗಿಸುವ ಶಿಕ್ಷಣವು ಪರಿಣಾಮಕಾರಿಯಾಗಿ ಅಭಿವೃದ್ಧಿಗೆ ಪೂರಕವಾಗಿದೆ ಎಂದು ತಿಳಿದುಬರುತ್ತದೆ. ಆದರೆ ಕೆಲವು ಫಲಾನುಭವಿಗಳು ಶಿಕ್ಷಣದ ಗುಣಮಟ್ಟ ತೃಪ್ತಿಕರ ಮತ್ತು ಉತ್ತಮವಾಗಿಲ್ಲ ಎಂಬ ಅಭಿಪ್ರಾಯಗಳನ್ನು ಹೊಂದಿದ್ದಾರೆ.

## ೪.೪ ಸರ್ಕಾರೇತರ ಸಂಸ್ಥೆಗಳು ಹಮ್ಮಿಕೊಂಡಿರುವ ಕೃಷಿ ಅಭಿವೃದ್ಧಿ ಕಾರ್ಯಕ್ರಮಗಳು

ನಮ್ಮ ದೇಶದಲ್ಲಿ ಕೃಷಿ ಪ್ರಧಾನ ಮತ್ತು ಮೂಲ ಕಸುಬಾಗಿದೆ. ನಮ್ಮ ದೇಶದ ಶೇಕಡಾ ೬೫ ರಷ್ಟು ಜನರು ಕೃಷಿಯ ಮೇಲೆ ಅವಲಂಬಿತರಾಗಿದ್ದಾರೆ. ಗ್ರಾಮೀಣ ಕೃಷಿಯು ಅಭಿವೃದ್ಧಿ ಹೊಂದಿದರೆ ನಮ್ಮ ದೇಶವು ಅಭಿವೃದ್ಧಿಯನ್ನು ಹೊಂದುತ್ತದೆ. ಗ್ರಾಮೀಣ ಜನರು ಬಂಡವಾಳದ ಮತ್ತು ಉತ್ತಮ ತಂತ್ರಜ್ಞಾನದ ಕೊರತೆಯನ್ನು ಅನುಭವಿಸುತ್ತಿದ್ದಾರೆ. ಈ ನಿಟ್ಟಿನಲ್ಲಿ ಕೃಷಿಯನ್ನು ಅಭಿವೃದ್ಧಿ ಪಡಿಸಲು ಮತ್ತು ಉತ್ತಮ ತಂತ್ರಜ್ಞಾನದ ಮಾಹಿತಿ ಮತ್ತು ತರಬೇತಿಗಳನ್ನು ನೀಡುವಲ್ಲಿ ಸರ್ಕಾರೇತರ ಸಂಸ್ಥೆಗಳು ಪ್ರಮುಖ ಪಾತ್ರವಹಿಸುತ್ತವೆ. ಸರ್ಕಾರೇತರ ಸಂಸ್ಥೆಗಳು ಅನೇಕ ಕೃಷಿ ಮೇಳಗಳನ್ನು ನಡೆಸಿ ಉತ್ತಮವಾದ ತಳಿಗಳು ಮತ್ತು ರಸಗೊಬ್ಬರಗಳು, ಬೀಜಗಳು ಮತ್ತು ಆಧುನಿಕ ಕೃಷಿ ತಂತ್ರಜ್ಞಾನಗಳ ಬಗ್ಗೆ ಮಾಹಿತಿಗಳನ್ನು ಗ್ರಾಮೀಣ ಪ್ರದೇಶದ ಜನರಿಗೆ ನೀಡುತ್ತವೆ. ಅಲ್ಲದೆ ಗ್ರಾಮೀಣ ಜನರಿಗೆ ಕೃಷಿಯನ್ನು ನಡೆಸಲು ಕಡಿಮೆ ಬಡ್ಡಿ ದರದಲ್ಲಿ ಸಾಲ ಸೌಲಭ್ಯಗಳನ್ನು ಸರ್ಕಾರೇತರ ಸಂಸ್ಥೆಗಳು ಒದಗಿಸುತ್ತಿವೆ. ಈ ಕೆಳಗಿನ ಕೋಷ್ಟಕಗಳಲ್ಲಿ ಸರ್ಕಾರೇತರ ಸಂಸ್ಥೆಗಳು ಕೃಷಿ ಅಭಿವೃದ್ಧಿಗೆ ನೀಡುವ ಸಹಾಯದ ವಿವರಗಳನ್ನು ನೀಡಲಾಗಿದೆ.

**ಕೋಷ್ಟಕ ೪.೧೦ ಸರ್ಕಾರೇತರ ಸಂಸ್ಥೆಗಳು ಕೃಷಿ ಅಭಿವೃದ್ಧಿಗೆ ನೀಡುವ ಸಹಾಯದ ವಿವರಗಳು**

| ಕ್ರ .ಸ | ಸಹಾಯದ ಬಗೆಗಳು | ಫಲಾನುಭವಿಗಳ ಸಂಖ್ಯೆ | ಶೇಕಡವಾರು (%) |
|---|---|---|---|
| ೧ | ಹಣಕಾಸಿನ ಪೂರೈಕೆ | ೦೮ | ೨೬.೬೭ |
| ೨ | ಉತ್ತಮ ಬೀಜಗಳ ಪೂರೈಕೆ | ೦೭ | ೨೩.೩೩ |
| ೩ | ಕೃಷಿ ತರಬೇತಿಗಳನ್ನು ಒದಗಿಸುವುದು | ೦೫ | ೧೬.೬೭ |
| ೪ | ಕೀಟನಾಶಕಗಳ ಪೂರೈಕೆ | ೦೬ | ೨೦ |
| ೫ | ಇತರೆ | ೦೪ | ೧೩.೩೩ |
| | ಒಟ್ಟು | ೩೦ | ೧೦೦ % |

ಮೂಲ : ಸಂಶೋಧಕರ ಕ್ಷೇತ್ರಕಾರ್ಯಾಧರಿತ ಮಾಹಿತಿ

## ಸರ್ಕಾರೇತರ ಸಂಸ್ಥೆಗಳು ಕೃಷಿ ಅಭಿವೃದ್ಧಿಗೆ ನೀಡುವ ಸಹಾಯದ ವಿವರಗಳು




**ರೇಖಾ ನಕ್ಷೆ ೪.೭ ಮೂಲ : ಸಂಶೋಧಕರ ಕ್ಷೇತ್ರಕಾರ್ಯಾಧರಿತ ಮಾಹಿತಿ**

ಈ ಮೇಲಿನ ಕೋಷ್ಟಕದಲ್ಲಿ ಉಲ್ಲೇಖಿಸಿರುವಂತೆ ಶೇಕಡಾ ೨೬.೨೭ ರಷ್ಟು ಫಲಾನುಭವಿಗಳು ಸರ್ಕಾರೇತರ ಸಂಸ್ಥೆಗಳಿಂದ ಕೃಷಿ ಅಭಿವೃದ್ಧಿಗೆ ಹಣಕಾಸಿನ ಸಹಾಯವನ್ನು ಪಡೆದಿದ್ದಾರೆ. ಶೇಕಡಾ ೨೩.೩೩ ರಷ್ಟು ಫಲಾನುಭವಿಗಳಿಗೆ ಸರ್ಕಾರೇತರ ಸಂಸ್ಥೆಗಳು ಉತ್ತಮ ಬೀಜಗಳನ್ನು ಕೃಷಿ ಚಟುವಟಿಕೆಗಳಿಗೆ ಒದಗಿಸಿದ್ದಾರೆ. ಹಾಗೂ ಶೇಕಡಾ ೧೬.೬೭ ರಷ್ಟು ಫಲಾನುಭವಿಗಳು ಸರ್ಕಾರೇತರ ಸಂಸ್ಥೆಗಳಿಂದ ಕೃಷಿ ತರಬೇತಿಗಳನ್ನು ಪಡೆದುಕೊಂಡಿರುತ್ತಾರೆ. ಅದೇ ರೀತಿ ಶೇಕಡಾ ೨೦ ರಷ್ಟು ಫಲಾನುಭವಿಗಳಿಗೆ ಸರ್ಕಾರೇತರ ಸಂಸ್ಥೆಗಳಿಂದ ತಮ್ಮ ಕೃಷಿಗೆ ಬೇಕಾದ ಕೀಟನಾಶಕಗಳ ಸವಲತ್ತುಗಳು ದೊರೆತಿವೆ. ಹಾಗೂ ಶೇಕಡಾ ೧೩.೩೩ ರಷ್ಟು ಫಲಾನುಭವಿಗಳಿಗೆ ತಮ್ಮ ಕೃಷಿ ಅಭಿವೃದ್ಧಿಯನ್ನು ಮಾಡಲು ಇನ್ನಿತರ ಸಹಾಯಗಳು ದೊರೆತಿವೆ.

ಈ ಮೇಲಿನ ಅಂಕಿ ಅಂಶಗಳನ್ನು ಗಮನಿಸಿದಾಗ ಸರ್ಕಾರೇತರ ಸಂಸ್ಥೆಗಳು ಕೃಷಿ ಅಭಿವೃದ್ಧಿಗೆ ಹೆಚ್ಚಿನ ಪ್ರಾಶಸ್ತ್ಯವನ್ನು ನೀಡುತ್ತಿವೆ. ಹೆಚ್ಚಿನ ಪ್ರಮಾಣದಲ್ಲಿ ಫಲಾನುಭವಿಗಳು ಸರ್ಕಾರೇತರ ಸಂಸ್ಥೆಗಳು ನೀಡುವ ಹಣಕಾಸಿನ ಮತ್ತು ಉತ್ತಮ ಬೀಜಗಳ ಸಹಾಯಗಳನ್ನು ಪಡೆಯುತ್ತಿದ್ದಾರೆ. ಅದಲ್ಲದೆ ಸರ್ಕಾರೇತರ ಸಂಸ್ಥೆಗಳು ಕೃಷಿ ಅಭಿವೃದ್ಧಿಗಾಗಿ ಆಧುನಿಕ ತಂತ್ರಜ್ಞಾನಗಳ ಬಳಕೆ ಮತ್ತು ಕೃಷಿಯಲ್ಲಿ ಜೈವಿಕ ಗೊಬ್ಬರಗಳ ಬಳಕೆಯ ಬಗ್ಗೆ ಸಲಹೆ ಸೂಚನೆಗಳನ್ನು ನೀಡುತ್ತಾರೆ. ಇದರಿಂದ ನಮಗೆ ತಿಳಿಯುವುದೇನೆಂದರೆ ಸರ್ಕಾರೇತರ ಸಂಸ್ಥೆಗಳು ಕೃಷಿ ಅಭಿವೃದ್ಧಿಗಾಗಿ ಹಮ್ಮಿಕೊಂಡಿರುವ ಯೋಜನೆಗಳ ಸಹಾಯವನ್ನು ಫಲಾನುಭವಿಗಳು ಪಡೆಯುತ್ತಿದ್ದಾರೆ.

## ೪.೪ ಸರ್ಕಾರೇತರ ಸಂಸ್ಥೆಗಳು ಹಮ್ಮಿಕೊಂಡಿರುವ ಮಹಿಳಾ ಅಭಿವೃದ್ಧಿ ಕಾರ್ಯಕ್ರಮಗಳು

ಸರ್ಕಾರೇತರ ಸಂಸ್ಥೆಗಳು ಮಹಿಳಾ ಅಭಿವೃದ್ಧಿಯ ಅಂಶಗಳನ್ನು ಒಳಗೊಂಡಿವೆ. ಮಹಿಳೆಯರಿಗೆ ಸ್ವಾತಂತ್ರ ಮತ್ತು ಸಮಾನತೆಯನ್ನು ಒದಗಿಸುವುದು, ಮಹಿಳೆಯರ ಸ್ಥಾನಮಾನಗಳನ್ನು ಉತ್ತಮ ಪಡಿಸಲು ಆರ್ಥಿಕ ಅವಕಾಶಗಳನ್ನು ಸೃಷ್ಟಿಸುವುದು, ಶಿಕ್ಷಣ, ಆರೋಗ್ಯ, ಆಡಳಿತ ಕ್ಷೇತ್ರಗಳಲ್ಲಿ ಮಹಿಳೆಯರಿಗೆ ಸರಿಯಾದ ಸ್ಥಾನಮಾನ ಮತ್ತು ಅವಕಾಶಗಳನ್ನು ಒದಗಿಸುವುದರಲ್ಲಿ ಸರ್ಕಾರೇತರ ಸಂಸ್ಥೆಗಳು ಪ್ರಮುಖ ಕಾರ್ಯ ನಿರ್ವಹಿಸುತ್ತವೆ.

ಮಹಿಳೆಯರಿಗೆ ಉತ್ತಮ ತರಬೇತಿಯನ್ನು ನೀಡಿ, ತಮ್ಮದೇ ಆದ ಸ್ವಂತ ಉದ್ಯೋಗವನ್ನು ಪ್ರಾರಂಭಿಸಿ ತಮ್ಮ ಮತ್ತು ತಮ್ಮ ಕುಟುಂಬದ ಉತ್ತಮ ನಿರ್ವಹಣೆಯನ್ನು ಮಾಡುವಲ್ಲಿ ಸರ್ಕಾರೇತರ ಸಂಸ್ಥೆಗಳು ಮಹಿಳೆಯರಿಗೆ ಹೆಚ್ಚಿನ ಪ್ರೋತ್ಸಾಹವನ್ನು ನೀಡುತ್ತಿವೆ. ಮಹಿಳೆಯರಲ್ಲಿ ಉಳಿತಾಯದ ಪ್ರವೃತ್ತಿಯನ್ನು ಬೆಳೆಸಿ ಮಹಿಳೆಯರಲ್ಲಿ ನಾಯಕತ್ವದ ಗುಣವನ್ನು ಬೆಳೆಸಲು ಸರ್ಕಾರೇತರ ಸಂಸ್ಥೆಗಳು ಶ್ರಮಿಸುತ್ತಿವೆ. ಈ ಕೆಳಗಿನ ಕೋಷ್ಟಕಗಳಲ್ಲಿ ಸರ್ಕಾರೇತರ ಸಂಸ್ಥೆಗಳ ಮಹಿಳಾ ಅಭಿವೃದ್ಧಿ ಕಾರ್ಯಕ್ರಮಗಳ ವಿವರಗಳನ್ನು ನೀಡಲಾಗಿದೆ.

### ಕೋಷ್ಟಕ ೪.೧೧ ಮಹಿಳಾ ಅಭಿವೃದ್ಧಿ ಕಾರ್ಯಕ್ರಮಗಳ ವಿವರಗಳು

| ಕ್ರ .ಸ | ವರ್ಗೀಕರಣ | ಫಲಾನುಭವಿಗಳ ಸಂಖ್ಯೆ | ಶೇಕಡವಾರು (%) |
|---|---|---|---|
| ೧ | ಸ್ವ-ಉದ್ಯೋಗವಕಾಶಗಳು | ೧೯ | ೩೧.೬೭ |
| ೨ | ಆರೋಗ್ಯ ಮಾಹಿತಿಗಳು | ೧೦ | ೧೬.೬೭ |
| ೩ | ಹಣಕಾಸಿನ ಸಹಾಯ | ೧೨ | ೨೦ |
| ೪ | ಮಹಿಳೆಯರ ವ್ಯಕ್ತಿತ್ವ ವಿಕಸನ | ೦೫ | ೮.೩೩ |
| ೫ | ಮಹಿಳಾ ಶಿಕ್ಷಣ | ೧೦ | ೧೬.೬೭ |
| ೬ | ಇತರೆ | ೦೪ | ೬.೬೬ |
| | ಒಟ್ಟು | ೬೦ | ೧೦೦ % |

ಮೂಲ : ಸಂಶೋಧಕರ ಕ್ಷೇತ್ರಕಾರ್ಯಾಧರಿತ ಮಾಹಿತಿ

## ಮಹಿಳಾ ಅಭಿವೃದ್ಧಿ ಕಾರ್ಯಕ್ರಮಗಳ ವಿವರಗಳು




**ರೇಖಾ ನಕ್ಷೆ ೪.೮ ಮೂಲ : ಸಂಶೋಧಕರ ಕ್ಷೇತ್ರಕಾರ್ಯಾಧರಿತ ಮಾಹಿತಿ**

ಈ ಮೇಲಿನ ಕೋಷ್ಟಕದಲ್ಲಿ ಸರ್ಕಾರೇತರ ಸಂಸ್ಥೆಗಳು ಹಮ್ಮಿಕೊಂಡಿರುವ ಮಹಿಳಾ ಅಭಿವೃದ್ಧಿ ಕಾರ್ಯಕ್ರಮಗಳ ಬಗ್ಗೆ ವಿವರಗಳನ್ನು ನೀಡಲಾಗಿದೆ. ಶೇಕಡಾ ೩೧.೬೭ ರಷ್ಟು ಮಹಿಳಾ ಫಲಾನುಭವಿಗಳಗೆ ಸರ್ಕಾರೇತರ ಸಂಸ್ಥೆಗಳು ಸ್ವ-ಉದ್ಯೋಗಗಳನ್ನು ನಡೆಸಲು ಸಹಾಯಗಳನ್ನು ಒದಗಿಸಿವೆ. ಶೇಕಡಾ ೨೦ ರಷ್ಟು ಮಹಿಳಾ ಫಲಾನುಭವಿಗಳಗೆ ಸರ್ಕಾರೇತರ ಸಂಸ್ಥೆಗಳು ಹಣಕಾಸಿನ ಸಹಾಯಗಳನ್ನು ನೀಡಿವೆ. ಅದೇ ರೀತಿ ಶೇಕಡಾ ೧೬.೬೭ ರಷ್ಟು ಫಲಾನುಭವಿಗಳಗೆ ಆರೋಗ್ಯ ಮಾಹಿತಿಗಳನ್ನು ಒದಗಿಸಿವೆ. ಶೇಕಡಾ ೮.೩೩ ರಷ್ಟು ಫಲಾನುಭವಿಗಳಗೆ ವ್ಯಕ್ತಿತ್ವ ವಿಕಸನವನ್ನು ಮಾಡಲು ಸರ್ಕಾರೇತರ ಸಂಸ್ಥೆಗಳು ಸಲಹೆ ಸೂಚನೆಗಳನ್ನು ನೀಡುತ್ತವೆ. ಅದೇ ರೀತಿ ಶೇಕಡಾ ೧೬.೬೭ ರಷ್ಟು ಮಹಿಳಾ ಫಲಾನುಭವಿಗಳು ಸರ್ಕಾರೇತರ ಸಂಸ್ಥೆಗಳಂದ ಶಿಕ್ಷಣ ಸೌಲಭ್ಯಗಳನ್ನು ಪಡೆದವರಾಗಿದ್ದಾರೆ. ಹಾಗೂ ಶೇಕಡಾ ೬.೬೬ ರಷ್ಟು ಮಹಿಳಾ ಫಲಾನುಭವಿಗಳು ಇತರ ಸವಲತ್ತುಗಳನ್ನು ಸರ್ಕಾರೇತರ ಸಂಸ್ಥೆಗಳಂದ ಪಡೆದಿದ್ದಾರೆ.

ಈ ಮೇಲಿನ ಅಂಕಿ ಅಂಶಗಳನ್ನು ಗಮನಿಸಿದಾಗ ಸರ್ಕಾರೇತರ ಸಂಸ್ಥೆಗಳಲ್ಲಿ ಅತೀ ಹೆಚ್ಚು ಮಹಿಳೆಯರು ಸರ್ಕಾರೇತರ ಸಂಸ್ಥೆಗಳಲ್ಲಿ ಸಿಗುವಂತಹ ಸಹಾಯಗಳನ್ನು ಪಡೆದವರಾಗಿದ್ದಾರೆ. ಮಹಿಳೆಯರ ಅಭಿವೃದ್ಧಿಯನ್ನು ಸಾಧಿಸಲು ಸರ್ಕಾರೇತರ ಸಂಸ್ಥೆಗಳು ಅನೇಕ ಕಾರ್ಯಕ್ರಮಗಳನ್ನು ಕೈಗೊಂಡಿದೆ. ಮತ್ತು ಮಹಿಳೆಯರು ಅತೀ ಹೆಚ್ಚು ಸ್ವ-ಉದ್ಯೋಗವಕಾಶ ಮತ್ತು ಹಣಕಾಸಿನ ಸಹಾಯಗಳನ್ನು ಪಡೆದು ಉತ್ತಮ ಭವಿಷ್ಯವನ್ನು ರೂಪಿಸಲು ಸರ್ಕಾರೇತರ ಸಂಸ್ಥೆಗಳು ಸಹಕಾರಿಯಾಗಿದೆ.

## ಫಲಾನುಭವಿಗಳ ಸಾಮಾಜಿಕ ಮತ್ತು ಆರ್ಥಿಕ ಬದಲಾವಣೆ :

### ಕೋಷ್ಟಕ ೪.೧೨ ಫಲಾನುಭವಿಗಳ ಸಾಮಾಜಿಕ ಮತ್ತು ಆರ್ಥಿಕ ಬದಲಾವಣೆಯ ವಿವರಗಳು

| ಕ್ರ .ಸ | ಅಭಿಪ್ರಾಯಗಳು | ಫಲಾನುಭವಿಗಳ ಸಂಖ್ಯೆ | ಶೇಕಡವಾರು |
|---|---|---|---|
| ೧ | ಅತ್ಯುತ್ತಮವಾಗಿದೆ | ೩೦ | ೩೦ |
| ೨ | ಉತ್ತಮವಾಗಿದೆ | ೬೧ | ೬೧ |
| ೩ | ತೃಪ್ತಿಕರ | ೦೭ | ೭ |
| ೪ | ಉತ್ತಮವಾಗಿಲ್ಲ | ೦೨ | ೨ |
| | ಒಟ್ಟು | ೧೦೦ | ೧೦೦ % |

ಮೂಲ : ಸಂಶೋಧಕರ ಕ್ಷೇತ್ರಕಾರ್ಯಾಧರಿತ ಮಾಹಿತಿ

ಈ ಮೇಲಿನ ಕೋಷ್ಟಕದಲ್ಲಿ ಫಲಾನುಭವಿಗಳ ಸಾಮಾಜಿಕ ಮತ್ತು ಆರ್ಥಿಕ ಸ್ಥಿತಿಗತಿಗಳ ಬದಲಾವಣೆಯ ವಿವರಗಳನ್ನು ನೀಡಲಾಗಿದೆ. ಶೇಕಡಾ ೩೦ ರಷ್ಟು ಫಲಾನುಭವಿಗಳು ಸರ್ಕಾರೇತರ ಸಂಸ್ಥೆಗಳ ಸದಸ್ಯರಾದ ನಂತರ ತಮ್ಮ ಜೀವನ ಮಟ್ಟವು ಸಾಮಾಜಿಕ ಮತ್ತು ಆರ್ಥಿಕವಾಗಿ ಅತ್ಯುತ್ತಮವಾಗಿದೆ ಎಂಬ ಅಭಿಪ್ರಾಯಗಳನ್ನು ಹೊಂದಿದ್ದಾರೆ. ಹಾಗೂ ಶೇಕಡಾ ೬೧ ರಷ್ಟು ಫಲಾನುಭವಿಗಳು ಸರ್ಕಾರೇತರ ಸಂಸ್ಥೆಗಳ ಫಲಾನುಭವಿಗಳಾದ ನಂತರ ಅವರ ಸಾಮಾಜಿಕ ಮತ್ತು ಆರ್ಥಿಕ ಸ್ಥಿತಿಗತಿಗಳು ಉತ್ತಮವಾಗಿದೆ ಎಂಬ ಅಭಿಪ್ರಾಯಗಳನ್ನು ಹೊಂದಿದ್ದಾರೆ. ಅದೇ ರೀತಿ ಶೇಕಡಾ ೭ ರಷ್ಟು ಫಲಾನುಭವಿಗಳು ತಮ್ಮ ಜೀವನ ಮಟ್ಟ ತೃಪ್ತಿಕರ ಮತ್ತು ಶೇಕಡಾ ೨ ರಷ್ಟು ಫಲಾನುಭವಿಗಳು ತಮ್ಮ ಸಾಮಾಜಿಕ ಮತ್ತು ಆರ್ಥಿಕ ಪರಿಸ್ಥಿತಿ ಇನ್ನೂ ಉತ್ತಮವಾಗಿಲ್ಲ ಎಂಬ ಅಭಿಪ್ರಾಯಗಳನ್ನು ಹೊಂದಿದ್ದಾರೆ.

ಈ ಅಂಕಿ ಅಂಶಗಳನ್ನು ಗಮನಿಸಿದಾಗ ಅತೀ ಹೆಚ್ಚು ಫಲಾನುಭವಿಗಳು ಸರ್ಕಾರೇತರ ಸಂಸ್ಥೆಗಳಿಂದ ಸಹಾಯಗಳನ್ನು ಪಡೆದು ತಮ್ಮ ಸಾಮಾಜಿಕ ಮತ್ತು ಆರ್ಥಿಕ ಸ್ಥಿತಿಗತಿಗಳಲ್ಲಿ ಉನ್ನತಿಯನ್ನು ಹೊಂದಿ ಉತ್ತಮ ಜೀವನವನ್ನು ನಡೆಸುವುದು ಕಂಡುಬರುತ್ತದೆ ಅದೇ ರೀತಿ ಕೆಲವು ಫಲಾನುಭವಿಗಳು ತಮ್ಮ ಸಾಮಾಜಿಕ ಮತ್ತು ಆರ್ಥಿಕ ಸ್ಥಿತಿಗತಿಗಳಲ್ಲಿ ಉನ್ನತಿಯಾಗಿಲ್ಲ ಎಂಬ ನಿಲುವನ್ನು ಹೊಂದಿದ್ದಾರೆ.

ಸರ್ಕಾರೇತರ ಸಂಸ್ಥೆಗಳು ಸಾಮಾಜಿಕ ಸ್ಥಿತಿಗತಿಗಳ ಸುಧಾರಣೆಯಲ್ಲಿ ಮಹತ್ವದ ಕಾರ್ಯವನ್ನು ನಿರ್ವಹಿಸುತ್ತವೆ. ಗ್ರಾಮೀಣ ಸಮಾಜಗಳ ಪಾರಂಪರಿಕವಾದ ಜೀವನ ಮೌಲ್ಯಗಳು ನಂಬಿಕೆಗಳು, ಆಚಾರ ವಿಚಾರಗಳು ಗ್ರಾಮೀಣಾಭಿವೃದ್ಧಿ ಕ್ರಿಯೆಗೆ ಪೂರಕವಾಗಿಲ್ಲ. ಗ್ರಾಮೀಣ ಜನರು ಇನ್ನೂ ಅನಕ್ಷರಸ್ಥರಾಗಿ ಉಳಿದಿದ್ದಾರೆ. ಗ್ರಾಮೀಣ ಪ್ರದೇಶದ ಜನರು ಮೂಲಭೂತ ಸೌಕರ್ಯಗಳಿಂದ ವಂಚಿತರಾಗಿದ್ದಾರೆ. ಗ್ರಾಮೀಣ ಮಹಿಳೆಯರ ಮತ್ತು ಮಕ್ಕಳ ಸ್ಥಿತಿಗತಿಗಳು ಹಿನಾಯ ಸ್ಥಿತಿಯನ್ನು ತಲುಪಿದೆ. ಪ್ರತಿಯೊಬ್ಬರಿಗೂ ಸಮತೂಕದ ಆಹಾರ, ಗೌರವಯುತವಾದ ಮನೆ, ಮಕ್ಕಳ ಶಿಕ್ಷಣಕ್ಕಾಗಿ ಸೌಲಭ್ಯಗಳು ಮತ್ತು ಸಮರ್ಪಕವಾದ ವೈದ್ಯಕೀಯ ಪರಿಹಾರಗಳು ಲಭಿಸುತ್ತಿಲ್ಲ. ಭಾರತದಲ್ಲಿ ಸಹಸ್ರಾರು ಜನರು ಗ್ರಾಮೀಣ ಪ್ರದೇಶದಲ್ಲಿ ವಾಸಿಸುತ್ತಿದ್ದಾರೆ. ಗ್ರಾಮೀಣ ಪ್ರದೇಶಗಳಲ್ಲಿ ನಿರಂತರ ಸಮಸ್ಯೆಗಳು ತಾಂಡವವಾಡುತ್ತಿವೆ. ಗ್ರಾಮೀಣ ಜನತೆಯ ಆಶೋತ್ತರಗಳನ್ನು ಈಡೇರಿಸುವ ನಿಟ್ಟಿನಲ್ಲಿ ಸರಕಾರ ಅನೇಕ ಯೋಜನೆಗಳನ್ನು ಜಾರಿಗೆ ತಂದಿದೆ.

ಸರಕಾರವು ತಂದಂತಹ ಯೋಜನೆಗಳನ್ನು ಜಾರಿಗೆ ತಂದು ಅನುಷ್ಠಾನಗೊಳಿಸುವಲ್ಲಿ ಸರ್ಕಾರೇತರ ಸಂಸ್ಥೆಗಳು ಪ್ರಮುಖ ಪಾತ್ರವಹಿಸುತ್ತವೆ. ಸರಕಾರೇತರ ಸಂಸ್ಥೆಗಳು ಉನ್ನತ ಗುಣದರ್ಜೆಯ ಅಭಿವೃದ್ಧಿ ಸೇವೆಗಳನ್ನು ಪೂರೈಸಬಹುದು ಎಂಬುದನ್ನು ಸರಕಾರವೇ ಗುರುತಿಸಿದೆ. ಈ ಕಾರಣದಿಂದಾಗಿ ಸರ್ಕಾರೇತರ ಸಂಸ್ಥೆಗಳ ಬಗೆಗೆ ಎಲ್ಲರ ನಿರೀಕ್ಷೆ ಎತ್ತರಗೊಳ್ಳುತ್ತಿದೆ. ಸರ್ಕಾರೇತರ ಸಂಸ್ಥೆಗಳು ಕೈಗೊಂಡಿರುವ ಗ್ರಾಮೀಣಾಭಿವೃದ್ಧಿ ಕಾರ್ಯಕ್ರಮಗಳಿಂದ ಗ್ರಾಮೀಣ ಜನರ ಜೀವನ ಗುಣಮಟ್ಟ ಉತ್ತಮವಾಗುತ್ತಿದೆ. ಸರ್ಕಾರೇತರ ಸಂಸ್ಥೆಗಳು ಸ್ವಸಹಾಯ ಸಂಘಗಳ ಮೂಲಕ ಮಹಿಳಾ ಮತ್ತು ಮಕ್ಕಳ ವಿಕಾಸವನ್ನು ಕೈಗೊಳ್ಳುತ್ತಿವೆ. ಸರ್ಕಾರೇತರ ಸಂಸ್ಥೆಗಳು ಅನೇಕ ಬಾಲವಿಕಾಸ ಕೇಂದ್ರಗಳನ್ನು ಸ್ಥಾಪಿಸಿ ಮಹಿಳೆಯರು ಮತ್ತು ಮಕ್ಕಳ ರಕ್ಷಣೆಯನ್ನು ಮಾಡುತ್ತಿವೆ. ಗ್ರಾಮೀಣ ಪ್ರದೇಶದಲ್ಲಿ ನೆಲೆಯೂರಿರುವಂತಹ ಮೂಢ ನಂಬಿಕೆ ಕಂದಾಚಾರಗಳನ್ನು ತಡೆಗಟ್ಟಲು ಸರ್ಕಾರೇತರ ಸಂಸ್ಥೆಗಳು ವಿವಿಧ ಸಂಘ ಸಂಸ್ಥೆಗಳ ಮೂಲಕ ಪ್ರಯತ್ನಿಸುತ್ತಿವೆ. ಆದುದರಿಂದ ಇತ್ತೀಚಿನ ವರ್ಷಗಳಲ್ಲಿ ಸರಕಾರೇತರ ಸಂಸ್ಥೆಗಳ ಸಾಮರ್ಥ್ಯ ಸೃಷ್ಟಿಸುವುದರೆಡೆಗೆ ಗಮನ ನೀಡಲಾಗುತ್ತಿದೆ.



# ಅಧ್ಯಾಯ – ೫

# ಸಾರಾಂಶ ಮತ್ತು ಸಲಹೆ ಸೂಚನೆಗಳು

## ೫.೧ ಸಾರಾಂಶ :

ಗ್ರಾಮೀಣ ಅಭಿವೃದ್ಧಿ ಒಂದು ಬಹು ದೊಡ್ಡ ಸವಾಲಾಗಿದೆ. ಸರಕಾರವು ಅನೇಕ ರೀತಿಯ ಯೋಜನೆಗಳನ್ನು ಜಾರಿಗೆ ತಂದಿದ್ದರೂ ಗ್ರಾಮೀಣ ಅಭಿವೃದ್ಧಿಯನ್ನು ಸಾಧಿಸಲು ಸರ್ಕಾರೇತರ ಸಂಸ್ಥೆಗಳ ಪಾತ್ರವು ಬಹು ಮುಖ್ಯವೆನಿಸುತ್ತದೆ. ಗ್ರಾಮೀಣ ಅಭಿವೃದ್ಧಿಯಲ್ಲಿ ಸರ್ಕಾರೇತರ ಸಂಸ್ಥೆಗಳ ಪಾತ್ರದ ಕುರಿತು ದಕ್ಷಿಣ ಕನ್ನಡ ಜಿಲ್ಲೆಯ ವ್ಯಾಪ್ತಿಯಲ್ಲಿ ಕೈಗೊಂಡ ಅಧ್ಯಯನವು ನಾಲ್ಕು ಉದ್ದೇಶಗಳನ್ನು ಒಳಗೊಂಡಿದೆ. ಮೊದಲನೆಯದಾಗಿ ದಕ್ಷಿಣ ಕನ್ನಡ ಜಿಲ್ಲೆಯ ಗ್ರಾಮೀಣ ಪ್ರದೇಶಗಳಲ್ಲಿನ ಸರ್ಕಾರೇತರ ಸಂಸ್ಥೆಗಳ ಸ್ಥಿತಿಗತಿಗಳ ಬಗ್ಗೆ ಅಧ್ಯಯನವನ್ನು ಮಾಡುವುದು. ಎರಡನೆಯದಾಗಿ ಸರ್ಕಾರೇತರ ಸಂಸ್ಥೆಗಳ ಫಲಾನುಭವಿಗಳ ಸಾಮಾಜಿಕ, ಆರ್ಥಿಕ ಮತ್ತು ವಯಕ್ತಿಕ ಬದಲಾವಣೆಗಳ ಬಗ್ಗೆ ವಿಶ್ಲೇಷಣೆಯನ್ನು ಮಾಡುವುದು. ಮೂರನೆಯದಾಗಿ ಸ್ವ-ಉದ್ಯೋಗವಕಾಶಗಳನ್ನು ಸೃಷ್ಟಿಸುವಲ್ಲಿ ಸರ್ಕಾರೇತರ ಸಂಸ್ಥೆಗಳ ಪಾತ್ರದ ಬಗ್ಗೆ ಅಧ್ಯಯನವನ್ನು ಮಾಡುವುದು ಮತ್ತು ನಾಲ್ಕನೆಯದಾಗಿ ಗ್ರಾಮೀಣ ಪ್ರದೇಶದಲ್ಲಿರುವ ಶಿಕ್ಷಣ. ಕೃಷಿ ಮತ್ತು ಮಹಿಳೆಯರ ಸ್ಥಿತಿಗತಿಗಳ ಬದಲಾವಣೆಗಳಲ್ಲಿ ಸರ್ಕಾರೇತರ ಸಂಸ್ಥೆಗಳು ನಿರ್ವಹಿಸುತ್ತಿರುವ ಪಾತ್ರದ ಕುರಿತು ಅಧ್ಯಯನ.

ದಕ್ಷಿಣ ಕನ್ನಡ ಜಿಲ್ಲೆಯ ವ್ಯಾಪ್ತಿಯಲ್ಲಿ ಬರುವಂತಹ ವಿವಿಧ ಪ್ರದೇಶಗಳ ೧೦ ಸರ್ಕಾರೇತರ ಸಂಸ್ಥೆಗಳ, ಪ್ರತೀ ಸರ್ಕಾರೇತರ ಸಂಸ್ಥೆಗಳಲ್ಲಿನ ೧೦ ಫಲಾನುಭವಿಗಳು ಅಂದರೆ ಒಟ್ಟು ೧೦೦ ಫಲಾನುಭವಿಗಳಿಗೆ ಪ್ರಶ್ನಾವಳಿಗಳು ಮತ್ತು ಸಂದರ್ಶನಗಳ ಮೂಲಕ ವಿವರಗಳನ್ನು ಪಡೆಯಲಾಯಿತು. ಒಟ್ಟು ೧೦೦ ಫಲಾನುಭವಿಗಳು ಸರ್ಕಾರೇತರ ಸಂಸ್ಥೆಗಳ ಕಾರ್ಯನಿರ್ವಹಣೆಯ ಬಗ್ಗೆ ಕೇಳಿದ ಪ್ರಶ್ನೆಗಳಿಗೆ ಪ್ರತಿಕ್ರಿಯೆಯನ್ನು ನೀಡಿದ್ದಾರೆ. ಕ್ಷೇತ್ರಕಾರ್ಯದ ಮೊದಲು ಸರ್ಕಾರೇತರ ಸಂಸ್ಥೆಗಳ ಕಾರ್ಯನಿರ್ವಹಣೆ ಮತ್ತು ಫಲಾನುಭವಿಗಳ ಅಭಿವೃದ್ಧಿಗೆ ಸಂಬಂಧಿಸಿದಂತೆ ಹಲವು ಊಹೆಗಳಿದ್ದವು. ಫಲಾನುಭವಿಗಳಿಗೆ ಸರ್ಕಾರೇತರ ಸಂಸ್ಥೆಗಳ ಸವಲತ್ತುಗಳು ಸರಿಯಾದ ಮಟ್ಟದಲ್ಲಿ ದೊರೆಯುತ್ತಿಲ್ಲ, ಜನರು ಸಕ್ರಿಯವಾಗಿ ಸರ್ಕಾರೇತರ ಸಂಸ್ಥೆಗಳಲ್ಲಿ ಭಾಗವಹಿಸುತ್ತಿಲ್ಲ ಎಂದು ಭಾವಿಸಲಾಗಿತ್ತು. ಆದರೆ ಅತೀ ಹೆಚ್ಚಿನ ಫಲಾನುಭವಿಗಳು ಸರ್ಕಾರೇತರ ಸಂಸ್ಥೆಗಳ ಸದಸ್ಯತ್ವವನ್ನು ಪಡೆದು ಅದರ ಪ್ರಯೋಜನಗಳನ್ನು ಪಡೆಯುತ್ತಿರುವುದು ಕಂಡುಬಂದಿದೆ.ಆದರೆ ಎಲ್ಲಾ ಫಲಾನುಭವಿಗಳಿಗೆ ಸರ್ಕಾರೇತರ ಸಂಸ್ಥೆಗಳ ಎಲ್ಲಾ ಸವಲತ್ತು ಮತ್ತು ಪ್ರಯೋಜನಗಳು ಸಮಾನ ರೀತಿಯಲ್ಲಿ ಹಂಚಿಕೆಯಾಗದಿರುವುದು ಕಂಡುಬರುತ್ತದೆ.

ಸರ್ಕಾರೇತರ ಸಂಸ್ಥೆಗಳ ಕಾರ್ಯನಿರ್ವಹಣೆಯಲ್ಲಿ ಫಲಾನುಭವಿಗಳು ನಿರೀಕ್ಷಿತ ಮಟ್ಟದಲ್ಲಿ ಪಾಲ್ಗೊಳ್ಳುತ್ತಿಲ್ಲ ಹಾಗೂ ಸರ್ಕಾರೇತರ ಸಂಸ್ಥೆಗಳ ಹಮ್ಮಿಕೊಂಡಿರುವ ಗ್ರಾಮೀಣ ಅಭಿವೃದ್ಧಿ ಯೋಜನೆಗಳು ಸರಿಯಾದ ರೀತಿಯಲ್ಲಿ ಜನರಿಗೆ ಲಭಿಸುತ್ತಿಲ್ಲ, ಜನರ ಸಾಮಾಜಿಕ ಮತ್ತು ಆರ್ಥಿಕ ಸ್ಥಿತಿಗತಿಗಳು ಸುಧಾರಣೆಯನ್ನು ಕಂಡಿಲ್ಲ ಎಂಬ ಪೂರ್ವ ಅಭಿಪ್ರಾಯವನ್ನು ಹೊಂದಲಾಗಿತ್ತು. ಆದರೆ ಸರ್ಕಾರೇತರ ಸಂಸ್ಥೆಗಳ ಸವಲತ್ತುಗಳು ಹೆಚ್ಚಿನ ಸಂಖ್ಯೆಯಲ್ಲಿ ಫಲಾನುಭವಿಗಳಿಗೆ ಲಭಿಸುತ್ತಿದೆ ಮತ್ತು ಜನರು ಹೆಚ್ಚಿನ ಸಂಖ್ಯೆಯಲ್ಲಿ ಸರ್ಕಾರೇತರ ಸಂಸ್ಥೆಗಳ ಸದಸ್ಯರಾಗುತ್ತಿರುವುದು ಮಾಹಿತಿದಾರರ ಅಭಿಪ್ರಾಯಗಳಿಂದ ತಿಳಿದು ಬಂದಿದೆ. ಈ ಬಗ್ಗೆ ಕೆಲವು ಸರ್ಕಾರೇತರ ಸಂಸ್ಥೆಗಳ ಅಭಿಪ್ರಾಯಗಳನ್ನು ಪಡೆದುಕೊಳ್ಳಲಾಯಿತು. ಜನರು ಹೆಚ್ಚಿನ ಸಂಖ್ಯೆಯಲ್ಲಿ ಸರ್ಕಾರೇತರ ಸಂಸ್ಥೆಗಳ ಸದಸ್ಯತ್ವವನ್ನು ಪಡೆದು ಅದರ ಪ್ರಯೋಜನಗಳನ್ನು ಪಡೆಯುತ್ತಿದ್ದಾರೆ ಎಂದು ಎಂದು ವಿವರಗಳನ್ನು ನೀಡಿದೆ.

ಈ ಅಧ್ಯಯನದಲ್ಲಿ ಸರ್ಕಾರೇತರ ಸಂಸ್ಥೆಗಳ ಫಲಾನುಭವಿಗಳ ಸಾಮಾಜಿಕ, ಆರ್ಥಿಕ ಮತ್ತು ವಯಕ್ತಿಕ ಸ್ಥಿತಿಗತಿಗಳ ಬಗ್ಗೆ ವಿಶ್ಲೇಷಣೆಯನ್ನು ಮಾಡಲಾಯಿತು. ಅತೀ ಹೆಚ್ಚು ಫಲಾನುಭವಿಗಳು ಸರ್ಕಾರೇತರ ಸಂಸ್ಥೆಗಳ ಸದಸ್ಯದಾಗಿದ್ದು ತಮ್ಮ ವಯಕ್ತಿಕ ಆಸಕ್ತಿ ಮತ್ತು ಅಭಿವೃದ್ಧಿಯನ್ನು ಹೊಂದುವ ಉದ್ದೇಶದಿಂದ ಫಲಾನುಭವಿಗಳಾಗಿರುವುದು ಕಂಡುಬರುತ್ತದೆ. ಇದರಿಂದಾಗಿ ಫಲಾನುಭವಿಗಳು ಸಾಮಾಜಿಕವಾಗಿ, ಆರ್ಥಿಕವಾಗಿ ಮತ್ತು ವಯಕ್ತಿಕ ಮಟ್ಟದಲ್ಲಿ ಅಭಿವೃದ್ಧಿಯನ್ನು ಸಾಧಿಸುತ್ತಿದ್ದಾರೆ. ಜನರಿಗೆ ಸರ್ಕಾರೇತರ ಸಂಸ್ಥೆಗಳ ಬಗ್ಗೆ ಅರಿವು ಮೂಡಲಾರಂಬಿಸಿದೆ. ಸರ್ಕಾರೇತರ ಸಂಸ್ಥೆಗಳು ಅಭಿವೃದ್ಧಿಯನ್ನು ಸಾಧಿಸುವಲ್ಲಿ ಪ್ರಮುಖ ಪಾತ್ರವಹಿಸುತ್ತದೆ ಎಂದು ಈ ಅಧ್ಯಯನದ ಮೂಲಕ ತಿಳಿಯಬಹುದು. ಅದಲ್ಲದೆ ಸರ್ಕಾರೇತರ ಸಂಸ್ಥೆಗಳು ಹಮ್ಮಿಕೊಂಡಿರುವ ಸ್ವ-ಉದ್ಯೋಗವಕಾಶಗಳು, ಶಿಕ್ಷಣ, ಕೃಷಿ ಮತ್ತು ಮಹಿಳಾ ಅಭಿವೃದ್ಧಿ ಕಾರ್ಯಕ್ರಮಗಳು ಸಾಕಷ್ಟು ಮಟ್ಟಿಗೆ ಯಶಸ್ವಿಯಾಗಿರುವುದನ್ನು ಈ ಅಧ್ಯಯನದಲ್ಲಿ ತಿಳಿಯಬಹುದು.

ಕ್ಷೇತ್ರಕಾರ್ಯದ ಪ್ರಾಥಮಿಕ ಮೂಲಗಳಿಂದ ಸಂಗ್ರಹಿಸಿದ ಮಾಹಿತಿಗಳು, ಬೇರೆ ಬೇರೆ ಪತ್ರಿಕೆಗಳಿಂದ, ನಿಯತಕಾಲಿಕೆಗಳಿಂದ ಹಾಗೂ ಪರಾಮರ್ಶನ ಗ್ರಂಥಗಳಿಂದ ದೊರೆತ ಮಾಹಿತಿಗಳನ್ನು ಕ್ರೋಢೀಕರಿಸಿ, ಗ್ರಾಮೀಣ ಅಭಿವೃದ್ಧಿಯಲ್ಲಿ ಸರ್ಕಾರೇತರ ಸಂಸ್ಥೆಗಳ ಪಾತ್ರದ ಬಗ್ಗೆ ದಕ್ಷಿಣ ಕನ್ನಡ ಜಿಲ್ಲೆಯ ವ್ಯಾಪ್ತಿಯಲ್ಲಿ ಅಧ್ಯಯನವನ್ನು ನಡೆಸಿ ಕೆಲವು ನಿರ್ಧಾರಗಳಿಗೆ ಬರಲಾಗಿದೆ. ಹಾಗೂ ಸಲಹೆ ಸೂಚನೆಗಳನ್ನು ನೀಡಲಾಗಿದೆ.

ಈ ಸಂಪ್ರಬಂಧದಲ್ಲಿ ಒಟ್ಟು ಐದು ಅಧ್ಯಾಯಗಳಿದ್ದು, ಮೊದಲನೆಯ ಅಧ್ಯಾಯವು ಅಧ್ಯಯನದ ಉದ್ದೇಶಗಳು, ಪ್ರಾಮುಖ್ಯತೆ, ಇತಿಮಿತಿಗಳು, ಮತ್ತು ಅಧ್ಯಯನದ ವಿಧಾನಗಳ ಬಗ್ಗೆ ತಿಳಿಸುತ್ತದೆ.

ಎರಡನೆಯ ಅಧ್ಯಾಯವು ಗ್ರಾಮೀಣ ಅಭಿವೃದ್ಧಿ ಮತ್ತು ಸರ್ಕಾರೇತರ ಸಂಸ್ಥೆಗಳ ಮಹತ್ವದ ಬಗ್ಗೆ ಚರ್ಚಿಸುತ್ತದೆ. ಇದು ಗ್ರಾಮೀಣ ಅಭಿವೃದ್ಧಿಯ ವಿವಿಧ ಆಯಾಮಗಳು, ಮತ್ತು ಸರ್ಕಾರೇತರ ಸಂಸ್ಥೆಗಳು ಹಮ್ಮಿಕೊಂಡಿರುವ ಗ್ರಾಮೀಣ ಅಭಿವೃದ್ಧಿ ಯೋಜನೆಗಳು ಇತ್ಯಾದಿ ಅಂಶಗಳನ್ನು ಒಳಗೊಂಡಿದೆ. ಮೂರನೆಯ ಅಧ್ಯಾಯದಲ್ಲಿ ಅನುಷಂಗಿಕ ಮೂಲಗಳಿಂದ ದೊರೆತ ಮಾಹಿತಿಗಳನ್ನು ಕ್ರೋಢೀಕರಿಸಿ ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಸರ್ಕಾರೇತರ ಸಂಸ್ಥೆಗಳ ಸ್ಥಿತಿಗತಿಗಳ ಬಗ್ಗೆ ವಿವರಗಳನ್ನು ನೀಡಲಾಗಿದೆ. ಈ ಅಧ್ಯಾಯದಲ್ಲಿ ಅಧ್ಯಯನ ಪ್ರದೇಶದ ಸಮಾಜೋ- ಆರ್ಥಿಕ ಸ್ಥೂಲ ಪರಿಚಯವನ್ನು ನೀಡಲಾಗಿದೆ ಮತ್ತು ದಕ್ಷಿಣ ಕನ್ನಡ ಜಿಲ್ಲೆಯಲ್ಲಿನ ಸರ್ಕಾರೇತರ ಸಂಸ್ಥೆಗಳ ವಿಶ್ಲೇಷಣೆಯನ್ನು ಮಾಡಲಾಗಿದೆ. ನಾಲ್ಕನೆಯ ಅಧ್ಯಾಯದಲ್ಲಿ ಕ್ಷೇತ್ರಕಾರ್ಯದಲ್ಲಿ ದೊರೆತ ಮಾಹಿತಿಗಳನ್ನು ಸರಳ ಅಂಕಿಅಂಶಗಳ ವಿಧಾನದಿಂದ ವಿಶ್ಲೇಷಣೆಯನ್ನು ಮಾಡಿ, ಇಡೀ ಅಧ್ಯಯನವು ಕಂಡುಕೊಂಡ ವಿಷಯಗಳನ್ನು ಅಂಕಿ ಅಂಶಗಳ ಸಹಿತ ವಿವರಣೆಗಳನ್ನು ನೀಡಲಾಗಿದೆ. ಕೊನೆಯ ಅಧ್ಯಾಯವು ಈ ಸಂಪ್ರಬಂಧದ ಸಾರಾಂಶ, ಅಧ್ಯಯನದ ಶೋಧ, ಮತ್ತು ಸಲಹೆ ಸೂಚನೆಗಳನ್ನು ನೀಡುತ್ತದೆ.

## ೫.೨ ಅಧ್ಯಯನದ ಶೋಧ :

ಗ್ರಾಮೀಣಾಭಿವೃದ್ಧಿಯಲ್ಲಿ ಸರ್ಕಾರೇತರ ಸಂಸ್ಥೆಗಳ ಪಾತ್ರ, ದಕ್ಷಿಣ ಕನ್ನಡ ಜಿಲ್ಲೆಯ ವ್ಯಾಪ್ತಿಯಲ್ಲಿ ಕೈಗೊಂಡ ಅಧ್ಯಯನದಲ್ಲಿ ವಿವಿಧ ವಲಯಗಳ ೧೦ ಸರ್ಕಾರೇತರ ಸಂಸ್ಥೆಗಳಿಗೆ ಸೇರಿದ ೧೦೦ ಫಲಾನುಭವಿಗಳಿಂದ ಪ್ರಶ್ನಾವಳಿ ಮತ್ತು ಸಂದರ್ಶನದ ಮೂಲಕ ಮಾಹಿತಿಗಳನ್ನು ಪಡೆದು, ಅಧ್ಯಯನದ ಉದ್ದೇಶಗಳಿಗನುಗುಣವಾಗಿ ವಿಶ್ಲೇಷಣೆಯನ್ನು ಮಾಡಲಾಯಿತು.

**ಫಲಿತಾಂಶ :**

ಗ್ರಾಮೀಣಾಭಿವೃದ್ಧಿಯಲ್ಲಿ ಸರ್ಕಾರೇತರ ಸಂಸ್ಥೆಗಳ ಪಾತ್ರದ ಕುರಿತು ಕ್ಷೇತ್ರಕಾರ್ಯದಲ್ಲಿ ದೊರೆತ ಮಾಹಿತಿಗಳ ವಿಶ್ಲೇಷಣೆ.

- ಅತೀ ಹೆಚ್ಚಿನ ಸಂಖ್ಯೆಯಲ್ಲಿ ಜನರು ಸರ್ಕಾರೇತರ ಸಂಸ್ಥೆಗಳನ್ನು ಸೇರುತ್ತಿದ್ದಾರೆ. ಕೇವಲ ಶೇಕಡ ೨೨ ರಷ್ಟು ಫಲಾನುಭವಿಗಳು ವಯಕ್ತಿಕ ಆಸಕ್ತಿಯಿಂದ ಸರ್ಕಾರೇತರ ಸಂಸ್ಥೆಗಳನ್ನು ಸೇರಿದರೆ

ಇನ್ನು ಶೇಕಡ ೪೧ ರಷ್ಟು ಫಲಾನುಭವಿಗಳು ಸರ್ಕಾರೇತರ ಸಂಸ್ಥೆಗಳ ಸಿಬ್ಬಂಧಿಗಳ ಪ್ರೇರಣೆಯ ಮೇರೆಗೆ ಸರ್ಕಾರೇತರ ಸಂಸ್ಥೆಗಳ ಸದಸ್ಯರಾಗಿದ್ದಾರೆ.

- ಒಟ್ಟು ಸಂದರ್ಶಿಸಿದ ೧೦೦ ಫಲಾನುಭವಿಗಳಲ್ಲಿ ಶೇಕಡ ೫೬ ರಷ್ಟು ಫಲಾನುಭವಿಗಳು ಉಳಿತಾಯ ಮಾಡುವ ಉದ್ದೇಶದಿಂದ ಮತ್ತು ಶೇಕಡ ೧೮ ರಷ್ಟು ಫಲಾನುಭವಿಗಳು ಸಾಲ ಮತ್ತು ಇನ್ನಿತರ ಸೌಲಭ್ಯಗಳನ್ನು ಪಡೆಯುವ ಉದ್ದೇಶದಿಂದ ಸರ್ಕಾರೇತರ ಸಂಸ್ಥೆಗಳ ಫಲಾನುಭವಿಗಳಾಗಿದ್ದಾರೆ. ಇದರಿಂದ ಫಲಾನುಭವಿಗಳಲ್ಲಿ ಉಳಿತಾಯದ ಪ್ರವೃತ್ತಿ ಮತ್ತು ಅವರ ಸಾಮಾಜಿಕ ಮತ್ತು ಆರ್ಥಿಕ ಸ್ಥಿತಿಗತಿಗಳು ಅಭಿವೃದ್ಧಿಯಾಗುವುದು ಕಂಡುಬರುತ್ತದೆ.

- ಬ್ಯಾಂಕುಗಳಲ್ಲಿ ಉಳಿತಾಯ ಖಾತೆಗಳನ್ನು ಹೊಂದಿರುವ ಫಲಾನುಭವಿಗಳು ಶೇಕಡ ೮೩.೭೬ ರಷ್ಟಿದ್ದಾರೆ. ಸರ್ಕಾರೇತರ ಸಂಸ್ಥೆಗಳಿಂದ ದೊರೆಯುವ ಹಣಕಾಸಿನ ಸವಲತ್ತುಗಳು ಮತ್ತು ಇತರ ಪ್ರಯೋಜನಗಳನ್ನು ಫಲಾನುಭವಿಗಳು ಗರಿಷ್ಠ ಪ್ರಮಾಣದಲ್ಲಿ ಪಡೆಯುತ್ತಿದ್ದಾರೆ.

- ಸ್ವ-ಉದ್ಯೋಗವಕಾಶಗಳು ಗ್ರಾಮೀಣ ಪ್ರದೇಶದಲ್ಲಿರುವ ನಿರುದ್ಯೋಗದ ಸಮಸ್ಯೆಗಳನ್ನು ನಿವಾರಿಸುತ್ತದೆ. ಸರ್ಕಾರೇತರ ಸಂಸ್ಥೆಗಳಿಂದ ಅನೇಕ ಫಲಾನುಭವಿಗಳು ಸಹಾಯಗಳನ್ನು ಪಡೆದು ತಮ್ಮದೇ ಆದ ಸ್ವ-ಉದ್ಯೋಗಗಳನ್ನು ಪ್ರಾರಂಬಿಸಿ ತಮ್ಮ ಜೀವನ ಮಟ್ಟದಲ್ಲಿ ಸುಧಾರಣೆಯನ್ನು ಕಂಡಿದ್ದಾರೆ. ಶೇಕಡ ೪೭.೩೭ ರಷ್ಟು ಮಹಿಳೆಯರು ವಿವಿಧ ರೀತಿಯ ಸ್ವ-ಉದ್ಯೋಗಗಳನ್ನು ನಡೆಸುತ್ತಿದ್ದಾರೆ. ಅದೇ ರೀತಿ ಶೇಕಡ ೫೨.೬೩ ರಷ್ಟು ಪುರುಷರು ತಮ್ಮದೇ ಆದ ಸ್ವ-ಉದ್ಯೋಗಗಳನ್ನು ಪ್ರಾರಂಬಿಸಿ ತಮ್ಮ ಜೀವನ ಮಟ್ಟದಲ್ಲಿ ಸುಧಾರಣೆಯನ್ನು ಕಂಡಿದ್ದಾರೆ. ಆದರೆ ಮಹಿಳೆಯರ ಸ್ವ-ಉದ್ಯೋಗಗಳ ಶೇಕಡ ಪ್ರಮಾಣವು ಪರುಷರಿಗಿಂತ ಕಡಿಮೆ ಇರುವುದನ್ನು ಗಮನಿಸಬಹುದು. ಮಹಿಳೆಯರು ಸ್ವ-ಉದ್ಯೋಗಗಳಲ್ಲಿ ಪುರುಷರಿಗಿಂತ ಕಡಿಮೆ ಪ್ರಮಾಣದಲ್ಲಿ ಭಾಗವಹಿಸುತ್ತಾರೆ.

- ಸರ್ಕಾರೇತರ ಸಂಸ್ಥೆಗಳು ಶೇಕಡ ೬೦.೮೭ ರಷ್ಟು ಫಲಾನುಭವಿಗಳಿಗೆ ಉಚಿತ ಶಿಕ್ಷಣ ಮತ್ತು ವಿದ್ಯಾರ್ಥಿ ವೇತನದ ಸಹಾಯಗಳನ್ನು ಒದಗಿಸಿದೆ. ಸರ್ಕಾರೇತರ ಸಂಸ್ಥೆಗಳು ಗ್ರಾಮೀಣ ಶಿಕ್ಷಣಕ್ಕೆ ಹೆಚ್ಚಿನ ಪ್ರಾಶಸ್ತ್ಯವನ್ನು ನೀಡುತ್ತಿದೆ. ಜನರು ಹೆಚ್ಚಿನ ಸಂಖ್ಯೆಯಲ್ಲಿ ಸರ್ಕಾರೇತರ ಸಂಸ್ಥೆಗಳ ಶೈಕ್ಷಣಿಕ ಫಲಾನುಭವಿಗಳಾಗಿದ್ದಾರೆ.

- ಸುಮಾರು ೩೦ ರಷ್ಟು ಫಲಾನುಭವಿಗಳು ಸರ್ಕಾರೇತರ ಸಂಸ್ಥೆಗಳಿಂದ ಕೃಷಿ ಅಭಿವೃದ್ಧಿಗೆ ಸಹಾಯವನ್ನು ಪಡೆದಿದ್ದಾರೆ. ಸರ್ಕಾರೇತರ ಸಂಸ್ಥೆಗಳು ಕೃಷಿ ಅಭಿವೃದ್ಧಿಗೆ ಹೆಚ್ಚಿನ ಮಟ್ಟದಲ್ಲಿ ಹಣಕಾಸಿನ ಪೂರೈಕೆ ಮತ್ತು ಇನ್ನಿತರ ಸೌಲಭ್ಯಗಳನ್ನು ಒದಗಿಸುತ್ತಿದೆ.

- ಸರ್ಕಾರೇತರ ಸಂಸ್ಥೆಗಳು ನಡೆಸುವ ಶೈಕ್ಷಣಿಕ ಚಟುವಟಿಕೆಗಳ ಮತ್ತು ಶಿಕ್ಷಣದ ಗುಣಮಟ್ಟದ ಬಗ್ಗೆ ಕೇವಲ ಶೇಕಡ ೧೭.೩೯ ರಷ್ಟು ಫಲಾನುಭವಿಗಳು 'ಅತ್ಯುತ್ತಮವಾಗಿದೆ' ಎಂದಿದ್ದಾರೆ. ಶೇಕಡ ೪೩.೪೮ ರಷ್ಟು ಫಲಾನುಭವಿಗಳು 'ಉತ್ತಮವಾಗಿದೆ' ಎನ್ನುವುದರ ಮೂಲಕ ಸರ್ಕಾರೇತರ ಸಂಸ್ಥೆಗಳಿಂದ ಇನ್ನಷ್ಟು ಉತ್ತಮ ಶೈಕ್ಷಣಿಕ ಸೇವೆಯನ್ನು ನಿರೀಕ್ಷಿಸುತ್ತಿದ್ದಾರೆ.

- ಒಟ್ಟು ೧೦೦ ಫಲಾನುಭವಿಗಳಲ್ಲಿ ಶೇಕಡ ೬೦ ರಷ್ಟು ಮಹಿಳೆಯರು ಸರ್ಕಾರೇತರ ಸಂಸ್ಥೆಗಳ ಫಲಾನುಭವಿಗಳಾಗಿದ್ದಾರೆ. ಇಂದಿನ ಗ್ರಾಮೀಣ ಸಮಾಜದಲ್ಲಿ ಮಹಿಳಾ ಸಬಲೀಕರಣದ ಅಗತ್ಯವಿದೆ. ಮಹಿಳೆಯರಿಗೆ ಉತ್ತಮ ಸ್ವ-ಉದ್ಯೋಗವಕಾಶಗಳನ್ನು ಒದಗಿಸಿ ಮಹಿಳೆಯರ ಸ್ಥಾನಮಾನಗಳನ್ನು ಉತ್ತಮ ಪಡಿಸುವಲ್ಲಿ ಸರ್ಕಾರೇತರ ಸಂಸ್ಥೆಗಳು ಸಾಕಷ್ಟು ಯಶಸ್ವಿಯಾಗಿವೆ. ಸರ್ಕಾರೇತರ ಸಂಸ್ಥೆಗಳು ಶೇಕಡ ೩೧.೬೭ ರಷ್ಟು ಸ್ವ-ಉದ್ಯೋಗವಕಾಶಗಳನ್ನು ಮಹಿಳೆಯರಿಗೆ ಒದಗಿಸಿದೆ ಅದಲ್ಲದೆ ಮಹಿಳೆಯರಿಗೆ ಆರೋಗ್ಯ ಮಾಹಿತಿಗಳು, ಹಣಕಾಸಿನ ಸಹಾಯಗಳನ್ನು ಒದಗಿಸಿ ಕೊಟ್ಟು ಅವರ ವ್ಯಕ್ತಿತ್ವ ವಿಕಸನವನ್ನು ಮಾಡಲು ಶ್ರಮಿಸುತ್ತಿದೆ.

- ಫಲಾನುಭವಿಗಳು ಸರ್ಕಾರೇತರ ಸಂಸ್ಥೆಗಳ ಸದಸ್ಯರಾದ ನಂತರ ಅವರ ಸಾಮಾಜಿಕ ಮತ್ತು ಆರ್ಥಿಕ ಸ್ಥಿತಿಗತಿಗಳ ಅಭಿವೃದ್ಧಿಯನ್ನು ಕಾಣಬಹುದು. ಕೇವಲ ಶೇಕಡ ೩೦ ರಷ್ಟು ಫಲಾನುಭವಿಗಳು ಸರ್ಕಾರೇತರ ಸಂಸ್ಥೆಗಳ ಸದಸ್ಯರಾದ ನಂತರ ಅವರ ಸಾಮಾಜಿಕ ಮತ್ತು ಆರ್ಥಿಕ ಪರಿಸ್ಥಿತಿಗಳು 'ಅತ್ಯುತ್ತಮವಾಗಿದೆ' ಎಂಬ ಅಭಿಪ್ರಾಯಗಳನ್ನು ಹೊಂದಿದ್ದಾರೆ. ಶೇಕಡ ೬೧ ರಷ್ಟು ಫಲಾನುಭವಿಗಳು ತಮ್ಮ ಸಾಮಾಜಿಕ ಮತ್ತು ಆರ್ಥಿಕ ಸ್ಥಿತಿಗತಿಗಳು 'ಉತ್ತಮವಾಗಿದೆ' ಎಂಬ ನಿಲುವು ಹೊಂದಿದ್ದಾರೆ. ಆದರೆ ಶೇಕಡ ೯ ರಷ್ಟು ಫಲಾನುಭವಿಗಳು ತಮ್ಮ ಸಾಮಾಜಿಕ ಮತ್ತು ಆರ್ಥಿಕ ಸ್ಥಿತಿಗತಿಗಳು 'ತೃಪ್ತಿಕರ ಮತ್ತು ಉತ್ತಮವಾಗಿಲ್ಲ ಎಂಬ ಅಭಿಪ್ರಾಯಗಳನ್ನು ಹೊಂದಿದ್ದಾರೆ.

ಒಟ್ಟಿನಲ್ಲಿ ಸರ್ಕಾರೇತರ ಸಂಸ್ಥೆಗಳು ಗ್ರಾಮೀಣ ಅಭಿವೃದ್ಧಿಯಲ್ಲಿ ಪ್ರಮುಖ ಪಾತ್ರವಹಿಸುತ್ತವೆ. ಜನರು ಸಕ್ರಿಯವಾಗಿ ಸರ್ಕಾರೇತರ ಸಂಸ್ಥೆಗಳ ಕಾರ್ಯಕ್ರಮಗಳಲ್ಲಿ ಪಾಲ್ಗೊಳ್ಳುವುದು ಕಂಡುಬರುತ್ತದೆ. ಗ್ರಾಮೀಣ ಜನರಿಗೆ ಸರಿಯಾದ ರೀತಿಯಲ್ಲಿ ಸರ್ಕಾರೇತರ ಸಂಸ್ಥೆಗಳ ಉಪಯುಕ್ತತೆಯ ಬಗ್ಗೆ ತಿಳುವಳಿಕೆಗಳನ್ನು ಸರ್ಕಾರೇತರ ಸಂಸ್ಥೆಗಳು ಮೂಡಿಸಬೇಕಾಗಿದೆ. ಗ್ರಾಮೀಣ ಪ್ರದೇಶದ ಜನರು ಶೇಕಡ ೧೦೦ ರಷ್ಟು ಸರ್ಕಾರೇತರ ಸಂಸ್ಥೆಗಳ ಪ್ರಯೋಜನಗಳನ್ನು ಪಡೆದರೆ ಸಂಪೂರ್ಣವಾಗಿ ಗ್ರಾಮೀಣ ಅಭಿವೃದ್ಧಿಯನ್ನು ಸಾಧಿಸಲು ಸಾಧ್ಯವಾಗುತ್ತದೆ. ಹೆಚ್ಚಿನ ಫಲಾನುಭವಿಗಳು ಸರ್ಕಾರೇತರ ಸಂಸ್ಥೆಗಳ ಬಗ್ಗೆ ಒಳ್ಳೆಯ ಅಭಿಪ್ರಾಯಗಳನ್ನು ಹೊಂದಿದ್ದಾರೆ. ಒಟ್ಟಿನಲ್ಲಿ ಹೇಳುವುದಾದರೆ ಸರ್ಕಾರೇತರ ಸಂಸ್ಥೆಗಳು ಗ್ರಾಮೀಣ ಸಮಸ್ಯೆಗಳನ್ನು ಹೋಗಲಾಡಿಸುವುದರಲ್ಲಿ ಉತ್ತಮ ಪಾತ್ರವಹಿಸುತ್ತದೆ ಎಂದು ಈ ಅಧ್ಯಯನವು ಗುರುತಿಸಿದೆ.

### ೫.೩ ಸಲಹೆ ಸೂಚನೆಗಳು :

ಗ್ರಾಮೀಣಾಭಿವೃದ್ಧಿಯಲ್ಲಿ ಸರ್ಕಾರೇತರ ಸಂಸ್ಥೆಗಳ ಪಾತ್ರದ ಕುರಿತು ದಕ್ಷಿಣ ಕನ್ನಡ ಜಿಲ್ಲೆಯ ವ್ಯಾಪ್ತಿಯಲ್ಲಿ ಕೈಗೊಂಡ ಅಧ್ಯಯನದಲ್ಲಿ ಕಂಡು ಬಂದ ಬೇರೆ ಬೇರೆ ಸಮಸ್ಯೆಗಳಿಗೆ ಕೆಲವು ಪರಿಹಾರಗಳನ್ನು ಹುಡುಕುವ ಪ್ರಯತ್ನವನ್ನು ಮಾಡಲಾಗಿದೆ. ಸರಕಾರದ ಅನೇಕ ಯೋಜನೆಗಳು ಜಾರಿಗೆ ಬಂದಿದ್ದರೂ ಅದು ಸರಿಯಾದ ರೀತಿಯಲ್ಲಿ ಗ್ರಾಮೀಣ ಪ್ರದೇಶದಲ್ಲಿ ಹಂಚಿಕೆಯಾಗಿಲ್ಲ ಈ ಯೋಜನೆಗಳನ್ನು ಸರ್ಕಾರೇತರ ಸಂಸ್ಥೆಗಳು ಗ್ರಾಮೀಣ ಮತ್ತು ನಗರ ಪ್ರದೇಶಗಳಲ್ಲಿ ಸರಿಯಾದ ರೀತಿಯಲ್ಲಿ ಹಂಚಿಕೆಯನ್ನು ನಡೆಸಬೇಕಾಗಿದೆ.

ಈ ದಿಸೆಯಲ್ಲಿ ಪ್ರಸ್ತುತ ಅಧ್ಯಯನವು ಕೆಲವು ಉಪಯುಕ್ತ ಸಲಹೆ ಮತ್ತು ಸೂಚನೆಗಳನ್ನು ನೀಡಲು ಬಯಸುತ್ತದೆ.

**ಸಲಹೆ ಸೂಚನೆಗಳು :**

- ಸಾಕಷ್ಟು ಮಂದಿ ಸರ್ಕಾರೇತರ ಸಂಸ್ಥೆಗಳ ಸದಸ್ಯರಾಗಿದ್ದರೂ ಎಲ್ಲ ಜನರಿಗೆ ಸರ್ಕಾರೇತರ ಸಂಸ್ಥೆಗಳ ಪ್ರಯೋಜನಗಳು, ಅರಿವು ಮತ್ತು ತಿಳುವಳಿಕೆಗಳು ಇಲ್ಲದಿರುವುದು ಕಂಡುಬರುತ್ತದೆ. ಈ ಬಗ್ಗೆ ಸರ್ಕಾರೇತರ ಸಂಸ್ಥೆಗಳು ಸೂಕ್ತ ಕ್ರಮಗಳನ್ನು ಕೈಗೊಳ್ಳಬೇಕು.

- ಗ್ರಾಮೀಣ ಪ್ರದೇಶಗಳಲ್ಲಿ ಹೆಚ್ಚಿನ ಸಂಖ್ಯೆಯಲ್ಲಿ ಸರ್ಕಾರೇತರ ಸಂಸ್ಥೆಗಳು ತಮ್ಮ ಶಾಖೆಗಳು ಮತ್ತು ಕಾರ್ಯಕಾರಿ ಇಲಾಖೆಗಳನ್ನು ಸ್ಥಾಪಿಸಿ ಗ್ರಾಮೀಣ ಜನರ ಸಮಸ್ಯೆಗಳನ್ನು ಬಗೆಹರಿಸಬೇಕು.
- ಗ್ರಾಮೀಣ ಪ್ರದೇಶಗಳಲ್ಲಿರುವ ಪ್ರತೀ ಮನೆಗಳನ್ನು ಭೇಟಿ ಮಾಡಿ ಅವರ ಸಮಸ್ಯೆಗಳನ್ನು ಪಟ್ಟಿ ಮಾಡಿ ಅದಕ್ಕೆ ಸೂಕ್ತ ಕ್ರಮಗಳನ್ನು ಕೈಗೊಳ್ಳಬೇಕು.
- ಗ್ರಾಮೀಣ ಪ್ರದೇಶಗಳ ಅಭಿವೃದ್ಧಿಯಲ್ಲಿ ಸರಕಾರದ ಪಾತ್ರವೂ ಮಹತ್ವದ್ದಾಗಿದೆ. ಸರಕಾರವು ಒದಗಿಸಿರುವ ವಿಶೇಷ ಸವಲತ್ತುಗಳನ್ನು ಸರ್ಕಾರೇತರ ಸಂಸ್ಥೆಗಳು ಜನರಿಗೆ ತಲುಪುವಂತೆ ಮಾಡಬೇಕು.
- ಗ್ರಾಮೀಣ ಪ್ರದೇಶಗಳಲ್ಲಿ ವಿಶೇಷ ಮನೋರಂಜನಾ ಕಾರ್ಯಕ್ರಮಗಳನ್ನು ನಡೆಸುವುದರ ಮೂಲಕ ಜನರಲ್ಲಿ ಸಾಮಾಜಿಕ ಜಾಗೃತಿ ಮತ್ತು ಸರ್ಕಾರೇತರ ಸಂಸ್ಥೆಗಳ ಪ್ರಯೋಜನಗಳ ಬಗ್ಗೆ ಅರಿವನ್ನು ಮೂಡಿಸಬೇಕು.
- ಗ್ರಾಮೀಣ ಜನರ ಮೇಲೆ ನಡೆಯುವಂತಹ ಶೋಷಣೆ , ಭ್ರಷ್ಟಾಚಾರ ಮತ್ತು ಅನಾಚಾರಗಳನ್ನು ಪತ್ತೆ ಹಚ್ಚಿ , ಶೋಷಣೆ ಮಾಡುವವರ ವಿರುದ್ಧ ಸೂಕ್ತ ಕ್ರಮಗಳನ್ನು ಸರ್ಕಾರೇತರ ಸಂಸ್ಥೆಗಳು ಕೈಗೊಳ್ಳಬೇಕು.
- ಗ್ರಾಮೀಣ ಪ್ರದೇಶಗಳಲ್ಲಿ ವಯಸ್ಕರ ಶಿಕ್ಷಣಾ ಕೇಂದ್ರಗಳನ್ನು ಸ್ಥಾಪಿಸಿ ವಯಸ್ಕರಿಗೆ ಮತ್ತು ಅನಕ್ಷರಸ್ಥರಿಗೆ ಸರಿಯಾದ ರೀತಿಯಲ್ಲಿ ಉಚಿತ ಶಿಕ್ಷಣಗಳನ್ನು ಒದಗಿಸಬೇಕು
- ಗ್ರಾಮೀಣ ಪ್ರದೇಶಗಳಲ್ಲಿ ಸರ್ಕಾರೇತರ ಸಂಸ್ಥೆಗಳು ತರಬೇತಿ, ತಂತ್ರಜ್ಞಾನ ಕೇಂದ್ರಗಳನ್ನು ಸ್ಥಾಪಿಸಬೇಕು ಮತ್ತು ಗ್ರಾಮೀಣ ಪ್ರದೇಶಗಳಲ್ಲಿ ದೂರು ಮತ್ತು ಸಮಸ್ಯಾ ವಿಭಾಗಗಳು ಎಂಬ ಕೇಂದ್ರಗಳನ್ನು ಸ್ಥಾಪಿಸುವುದರಿಂದ ಗ್ರಾಮೀಣ ಜನರ ಸಮಸ್ಯೆಗಳನ್ನು ಸುಲಭವಾಗಿ ಅರ್ಥೈಸಿಕೊಳ್ಳಬಹುದು ಮತ್ತು ಬಗೆಹರಿಸಬಹುದು.
- ಸ್ವ-ಉದ್ಯೋಗವಕಾಶಗಳನ್ನು ಫಲಾನುಭವಿಗಳು ತಮ್ಮ ಮನೆಯಲ್ಲಿಯೇ ನಡೆಸುವಂತೆ ಅಥವಾ ತಮ್ಮ ಗ್ರಾಮದ ಹತ್ತಿರದ ಪ್ರದೇಶಗಳಲ್ಲಿ ನಡೆಸುವಂತೆ ಸರ್ಕಾರೇತರ ಸಂಸ್ಥೆಗಳು ನೋಡಿಕೊಳ್ಳಬೇಕು ಇದರಿಂದ ಫಲಾನುಭವಿಗಳ ಉತ್ಪಾದನೆಯು ಹೆಚ್ಚಳವಾಗುತ್ತದೆ. ಅದಲ್ಲದೆ ಸ್ವ-ಉದ್ಯೋಗಳನ್ನು ನಡೆಸಲು ಉತ್ತಮ ತರಬೇತಿಗಳನ್ನು ನೀಡಬೇಕು.

- ಗ್ರಾಮೀಣ ಪ್ರದೇಶಗಳ ಮಕ್ಕಳಿಗೆ ಉಚಿತ ಮತ್ತು ಕಡ್ಡಾಯ ಶಿಕ್ಷಣ ಜಾರಿಗೊಳಸಬೇಕು. ಶಾಲೆ ತಪ್ಪಿಸುವ ಮತ್ತು ಮಧ್ಯದಲ್ಲಿ ಶಾಲೆ ಬಿಡುವ ಮಕ್ಕಳ ಸಮಸ್ಯೆಗಳನ್ನು ಆಲಿಸಿ ಅದಕ್ಕೆ ಸೂಕ್ತ ಪರಿಹಾರಗಳನ್ನು ಕಂಡುಕೊಳ್ಳಬೇಕು.
- ಗ್ರಾಮೀಣ ಕೃಷಿಕರು ತಾವು ಬೆಳೆಸಿದ ಬೆಳೆಗಳನ್ನು ಮಾರಾಟ ಮಾಡಲು ಸೂಕ್ತ ವ್ಯವಸ್ಥೆಯನ್ನು ಸರ್ಕಾರೇತರ ಸಂಸ್ಥೆಗಳು ಕೈಗೊಳ್ಳಬೇಕು. ಪ್ರತೀ ಗ್ರಾಮಕ್ಕೆ ಒಂದರಂತೆ ಸೊಸೈಟಿಗಳನ್ನು ಸರ್ಕಾರೇತರ ಸಂಸ್ಥೆಗಳು ಸ್ಥಾಪಿಸಿ ಕೃಷಿಕರ ಬೆಳೆಗಳನ್ನು ತಾವೇ ಖರೀದಿಸಿ ಒಳ್ಳೆಯ ಬೆಲೆಯನ್ನು ಗ್ರಾಮೀಣ ಕೃಷಿಕರಿಗೆ ಒದಗಿಸಬೇಕು.
- ಗ್ರಾಮೀಣ ಪ್ರದೇಶಗಳಲ್ಲಿ ಸರ್ಕಾರೇತರ ಸಂಸ್ಥೆಗಳು ಬ್ಯಾಂಕುಗಳನ್ನು ಸ್ಥಾಪಿಸಬೇಕು. ಗ್ರಾಮೀಣ ಪ್ರದೇಶದ ಜನರಲ್ಲಿ ಉಳಿತಾಯದ ಪ್ರವೃತ್ತಿಯನ್ನು ಬೆಳೆಸಬೇಕು. ಉತ್ತಮ ಮತ್ತು ಕಡಿಮೆ ಬಡ್ಡಿದರದಲ್ಲಿ ಸಾಲವನ್ನು ನೀಡುವ ವ್ಯವಸ್ಥೆಯನ್ನು ಜನರಿಗೆ ಒದಗಿಸಬೇಕು.
- ಸರಕಾರದಿಂದ ಹೆಚ್ಚಿನ ಅನುದಾನಗಳನ್ನು ಸರ್ಕಾರೇತರ ಸಂಸ್ಥೆಗಳು ಪಡೆಯಬೇಕು ಮತ್ತು ವಿದೇಶೀ ಅನುದಾನಗಳನ್ನು ಪಡೆದು ಗ್ರಾಮೀಣ ಅಭಿವೃದ್ಧಿಗೆ ಹೆಚ್ಚಿನ ಪೂರಕ ಕೆಲಸಗಳನ್ನು ಕೈಗೊಳ್ಳಬೇಕು.
- ಗ್ರಾಮೀಣ ಪ್ರದೇಶದ ಮಹಿಳೆಯರು ಮತ್ತು ಮಕ್ಕಳ ಅಭಿವೃದ್ಧಿಗೆ ಹೆಚ್ಚಿನ ಅಂಗನವಾಡಿ ಮತ್ತು ಬಾಲವಿಕಾಸ ಕೇಂದ್ರಗಳನ್ನು ಸರ್ಕಾರೇತರ ಸಂಸ್ಥೆಗಳು ಸ್ಥಾಪಿಸಿ ಗ್ರಾಮೀಣ ಗರ್ಭಿಣಿ ಮಹಿಳೆಯರ ಆರೋಗ್ಯ ತಪಾಸಣೆಗಳನ್ನು ನಡೆಸಬೇಕು. ವರದಕ್ಷಿಣೆ ಮತ್ತು ಮಹಿಳೆಯರ ಮೇಲೆ ನಡೆಯುವಂತಹ ಬ್ರಷ್ಟಾಚಾರಗಳನ್ನು ತಡೆಗಟ್ಟಲು ಸರ್ಕಾರೇತರ ಸಂಸ್ಥೆಗಳು ಸೂಕ್ತ ಕನೂನು ಕ್ರಮಗಳನ್ನು ಕೈಗೊಳ್ಳಬೇಕು

## ೫.೪ ಮುಂದಿನ ಅಧ್ಯಯನಕ್ಕೆ ಅವಕಾಶಗಳು :

ಗ್ರಾಮೀಣಾಭಿವೃದ್ಧಿ ಮತ್ತು ಗ್ರಾಮೀಣ ಪ್ರದೇಶದ ಸಮಸ್ಯೆಗಳ ಪರಿಹಾರಗಳಿಗೆ ಸರ್ಕಾರೇತರ ಸಂಸ್ಥೆಗಳು ನಿರ್ವಹಿಸುತ್ತಿರುವ ಪಾತ್ರವನ್ನು, ಒಂದೇ ಅಧ್ಯಯನದಿಂದ ಅರಿಯುವುದು ಕಷ್ಟ ಎಂಬುದನ್ನು ನಾವು ಪ್ರಾಮಾಣಿಕವಾಗಿ ಒಪ್ಪಿಕೊಳ್ಳಬೇಕು. ಸರ್ಕಾರೇತರ ಸಂಸ್ಥೆಗಳು ನಿರ್ವಹಿಸುತ್ತಿರುವ ಗ್ರಾಮೀಣಾಬಿವೃದ್ಧಿ ಕಾರ್ಯಕ್ರಮಗಳ ಬಗ್ಗೆ ಇನ್ನಷ್ಟು ಸಂಶೋಧನೆಗಳು / ಅಧ್ಯಯನಗಳು ನಡೆಯಬೇಕಾಗಿದೆ. ಗ್ರಾಮೀಣ ಕ್ಷೇತ್ರವು ಒಂದು ಬಹಳ ವಿಸ್ತಾರವಾದ ಕ್ಷೇತ್ರವಾಗಿದ್ದು ಗ್ರಾಮೀಣ

ಪ್ರದೇಶದ ಸಾಮಾಜಿಕ , ಆರ್ಥಿಕ ಮತ್ತು ಧಾರ್ಮಿಕ ವಿಚಾರಗಳಲ್ಲಿ ಸಹ ವಿವಿಧ ರೀತಿಯ ಸಂಶೋಧನೆಗಳನ್ನು ನಡೆಸಬೇಕಾಗಿದೆ.

ಸಮಾಜೋ-ಆರ್ಥಿಕ ಮತ್ತು ಧಾರ್ಮಿಕ ಸಂಶೋಧನೆಗೆ ಅರ್ಹವಾದ ಕೆಲವು ಕ್ಷೇತ್ರಗಳನ್ನು ಈ ಅಧ್ಯಯನವು ಗುರುತಿಸಿದೆ. ಅವುಗಳು ಯಾವುದೆಂದರೆ :

- ಸಮಗ್ರ ಗ್ರಾಮೀಣಾಭಿವೃದ್ಧಿಯನ್ನು ಸಾಧಿಸಲು ಸರ್ಕಾರೇತರ ಸಂಸ್ಥೆಗಳು ಹಮ್ಮಿಕೊಂಡಿರುವ ಯೋಜನೆಗಳ ಬಗ್ಗೆ ಅಧ್ಯಯನ.
- ಗ್ರಾಮೀಣ ಜನರ ಅತೀ ಸೂಕ್ಷ್ಮ ಸಮಸ್ಯೆಗಳನ್ನು ಪರಿಹರಿಸುವಲ್ಲಿ ಸರ್ಕಾರೇತರ ಸಂಸ್ಥೆಗಳ ಪಾತ್ರದ ಕುರಿತು ಅಧ್ಯಯನ.
- ಸರ್ಕಾರೇತರ ಸಂಸ್ಥೆಗಳ ಒದಗಿಸುವ ಸ್ವ-ಉದ್ಯೋಗವಕಾಶಗಳ ಬಗ್ಗೆ ಒಂದು ಆಳವಾದ ಅಧ್ಯಯನ.
- ಗ್ರಾಮೀಣ ಧಾರ್ಮಿಕ ಸಮಸ್ಯೆಗಳ ಪರಿಹಾರದಲ್ಲಿ ಸರ್ಕಾರೇತರ ಸಂಸ್ಥೆಗಳ ಪಾತ್ರದ ಕುರಿತು ಅಧ್ಯಯನ.
- ಗ್ರಾಮೀಣ ಪ್ರದೇಶದ ಸಾಮಾಜಿಕ, ಆರ್ಥಿಕ ಅಭಿವೃದ್ಧಿಯಲ್ಲಿ ಸರ್ಕಾರೇತರ ಸಂಸ್ಥೆಗಳ ಪಾತ್ರದ ಕುರಿತು ಅಧ್ಯಯನ ಇತ್ಯಾದಿ.

## ೫.೫ ಕೊನೆ ಮಾತು

ಗ್ರಾಮೀಣಾಭಿವೃದ್ಧಿಯಲ್ಲಿ ಸರ್ಕಾರೇತರ ಸಂಸ್ಥೆಗಳ ಪಾತ್ರವು ಗಣನೀಯವಾಗಿದೆ. ಗ್ರಾಮೀಣ ಪ್ರದೇಶದ ಜನರಲ್ಲಿ ತಿಳುವಳಿಕೆ ಮತ್ತು ಜಾಗೃತಿಯನ್ನು ಮೂಡಿಸಿ ಗ್ರಾಮೀಣ ಜನರು ಅನುಭವಿಸುತ್ತಿರುವ ಸಮಸ್ಯೆಗಳಿಂದ ಹೊರಬರಲು ಸರ್ಕಾರೇತರ ಸಂಸ್ಥೆಗಳು ಸಹಕಾರಿಯಾಗಿವೆ ಎಂದು ಅನೇಕ ಜನರು ಅಭಿಪ್ರಾಯ ಪಟ್ಟಿದ್ದಾರೆ. ಆದರೆ ಪ್ರತಿಯೊಬ್ಬ ನಾಗರಿಕನೂ ತಮ್ಮ ತಮ್ಮ ಹಕ್ಕುಗಳನ್ನು ರಕ್ಷಿಸಲು ಹೋರಾಡಬೇಕಾಗುತ್ತದೆ. ಗ್ರಾಮೀಣ ಜನರ ಮೇಲೆ ನಡೆಯುವಂತಹ ದೌರ್ಜನ್ಯ ಮತ್ತು ಭ್ರಷ್ಟಾಚಾರಗಳ ವಿರುದ್ಧ ಹೋರಾಡಲು ಸರ್ಕಾರೇತರ ಸಂಸ್ಥೆಗಳು ಸೂಕ್ತ ಕ್ರಮಗಳನ್ನು ಕೈಗೊಳ್ಳಬೇಕಾಗುತ್ತದೆ.

ಸಮಸ್ಯೆಗಳು ಗ್ರಾಮೀಣ ಪ್ರದೇಶಗಳಲ್ಲಿಯೂ ಇವೆ ಮತ್ತು ನಗರ ಪ್ರದೇಶಗಳಲ್ಲಿಯೂ ಇವೆ. ಆದರೆ ಗ್ರಾಮೀಣ ಮತ್ತು ನಗರ ಪ್ರದೇಶಗಳಲ್ಲಿನ ಸಮಸ್ಯೆಗಳು ವಿವಿಧ ಕಾರಣಗಳಿಂದ ಭಿನ್ನತೆಯನ್ನು ಹೊಂದಿವೆ. ಗ್ರಾಮೀಣ ಪ್ರದೇಶಗಳಲ್ಲಿನ ಎಲ್ಲಾ ಸಮಸ್ಯೆಗಳನ್ನು ಸರ್ಕಾರೇತರ ಸಂಸ್ಥೆಗಳಿಂದ ಬಗೆಹರಿಸಲು ಅಸಾಧ್ಯವಾಗಿದೆ. ಈ ಬಗ್ಗೆ ಜನರು ಜಗೃತಿಯನ್ನು ಹೊಂದಬೇಕು. ತಮ್ಮ ಸಮಸ್ಯೆಗಳನ್ನು ವಾರ್ತಾಪತ್ರಿಕೆ, ದೂರದರ್ಶನ ಮಾಧ್ಯಮಗಳ ಮೂಲಕ ಸಂಬಂಧಪಟ್ಟವರಿಗೆ ತಿಳಿಯುವಂತೆ ಮಾಡಬೇಕು. ತಮ್ಮ ಸುತ್ತಮುತ್ತಲು ನಡೆಯುವಂತಹ ಶೋಷಣೆಗಳಿಗೆ ಸುಮ್ಮನಿರದೆ ಸಂಬಂಧಪಟ್ಟ ಅಧಿಕಾರಿಗಳಿಗೆ ತಿಳಿಸಿ ಸೂಕ್ತ ಕ್ರಮಗಳನ್ನು ಕೈಗೊಳ್ಳಲು ಕೋರಬೇಕು. ಸಾರ್ವಜನಿಕರು ಅತೀ ಹೆಚ್ಚಿನ ಸಂಖ್ಯೆಯಲ್ಲಿ ಸರ್ಕಾರೇತರ ಸಂಸ್ಥೆಗಳ ಪ್ರಯೋಜನಗಳನ್ನು ಪಡೆಯಬೇಕು.

ಸರ್ಕಾರೇತರ ಸಂಸ್ಥೆಗಳ ಬಗ್ಗೆ ಜನರಿಗೆ ತಿಳುವಳಿಕೆ ಮತ್ತು ಅರಿವನ್ನು ಉಂಟುಮಾಡಲು ಸರಕಾರವು ಸೂಕ್ತ ಕ್ರಮಗಳನ್ನು ಕೈಗೊಳ್ಳಬೇಕು. ಸರ್ಕಾರೇತರ ಸಂಸ್ಥೆಗಳ ಉಪಯೋಗಗಳ ಬಗ್ಗೆ ಜನರಿಗೆ ಸೂಕ್ತ ಮಾಹಿತಿ ಮತ್ತು ಸಲಹೆಗಳನ್ನು ನೀಡಬೇಕು. ಪ್ರತಿಯೊಂದು ನಾಗರಿಕರೂ ಉತ್ತಮ ಶಿಕ್ಷಣವನ್ನು ಪಡೆದು ದೇಶದ ಅಭಿವೃದ್ಧಿಯನ್ನು ಸಾಧಿಸಬೇಕು. ಗ್ರಾಮೀಣ ಪ್ರದೇಶಗಳು ಅಭಿವೃದ್ಧಿಯಾದರೆ ನಮ್ಮ ಇಡೀ ದೇಶವು ಅಭಿವೃದ್ಧಿಯಾಗುವುದರಲ್ಲಿ ಸಂಶಯವಿಲ್ಲ.



# ಅನುಬಂಧ -೧ ಪ್ರಶ್ನಾವಳಿ

## ಸರಕಾರೇತರ ಸಂಸ್ಥೆಗಳ ಫಲಾನುಭವಿಗಳಗೆ

## ಗ್ರಾಮೀಣಾಭಿವೃದ್ಧಿಯಲ್ಲಿ ಸರ್ಕಾರೇತರ ಸಂಸ್ಥೆಗಳ ಪಾತ್ರ

### ದಕ್ಷಿಣಕನ್ನಡ ಜಿಲ್ಲೆಯಲ್ಲಿ ಒಂದು ಅಧ್ಯಯನ

**ಪೀಠಿಕೆ :**

ಪ್ರಸ್ತುತ ಅಧ್ಯಯನದ ಮುಖ್ಯ ಉದ್ದೇಶವು ಗ್ರಾಮೀಣ ಅಭಿವೃದ್ಧಿಯಲ್ಲಿ ಸರ್ಕಾರೇತರ ಸಂಸ್ಥೆಗಳ ಪಾತ್ರವನ್ನು ಪರಿಶೀಲಿಸುವುದು ಮತ್ತು ಅವುಗಳ ಕಾರ್ಯಯೋಜನೆಗಳಿಂದ ಆದ ಅಭಿವೃದ್ಧಿಯ ಬಗ್ಗೆ ಪರಾಮರ್ಶೆ ನಡೆಸುವುದು.

ಸೂಚನೆಗಳು :

ಈ ಪ್ರಶ್ನಾವಳಿಯಲ್ಲಿ ವಿವಿಧ ಪ್ರಕಾರದ ಪ್ರಶ್ನೆಗಳಿವೆ ಕೆಲವು ಪ್ರಶ್ನೆಗಳಿಗೆ ಚುಟುಕಾಗಿ ಉತ್ತರಿಸಬಹುದು ಇನ್ನು ಕೆಲವು ಪ್ರಶ್ನೆಗಳಿಗೆ ಕೊಟ್ಟ ಉತ್ತರದಲ್ಲಿ ಸರಿಯಾದುದನ್ನು ಉತ್ತರಿಸಿದರಾಯಿತು.

- ಈ ಸಮೀಕ್ಷೆಯನ್ನು ಕೇವಲ ಅಧ್ಯಯನ ಉದ್ದೇಶಕ್ಕಾಗಿ ಮಾತ್ರ ಮಾಡಲಾಗುತ್ತಿದೆ.
- ನೀವು ನೀಡಿರುವ ವಿವರಗಳ ಗೌಪ್ಯತೆಯನ್ನು ಕಾಪಾಡಲಾಗುವುದು.
- ನಿಮ್ಮಇತರೆ ಉಪಯುಕ್ತ ಸಲಹೆ ಮತ್ತು ಪೂರಕ ಅಭಿಪ್ರಾಯವಿದ್ದಲ್ಲಿ ಕೃತಜ್ಞತಾಪೂರ್ವಕವಾಗಿ ಸ್ವೀಕರಿಸಲಾಗುವುದು.
- ನಿಮ್ಮ ಸಹಕಾರಕ್ಕಾಗಿ ಅನಂತ ಕೃತಜ್ಞತೆಗಳು.

## ಸಾಮಾನ್ಯ ಮಾಹಿತಿಗಳು

೧. ಹೆಸರು ಮತ್ತು ವಿಳಾಸ :

೨. ವೈವಾಹಿಕ ಸ್ಥಾನಮಾನ :
- ಅ) ವಿವಾಹಿತರು ☐
- ಆ) ಅವಿವಾಹಿತರು ☐
- ಇ) ವಿಧವೆಯರು ☐
- ಈ) ವಿಧುರರು ☐
- ಉ) ವಿಚ್ಛೇದಿತರು ☐

೩. ವಯಸ್ಸು :
- ಅ) ೨೦ ಕ್ಕಿಂತ ಕಡಿಮೆ ☐
- ಆ) ೨೦ ರಿಂದ ೩೦ ☐
- ಇ) ೩೦ ರಿಂದ ೪೦ ☐
- ಈ) ೪೦ ರಿಂದ ೫೦ ☐
- ಉ) ೫೦ ರಿಂದ ೬೦ ☐
- ಊ) ೬೦ ಕ್ಕಿಂತ ಮೇಲ್ಪಟ್ಟು ☐

೪. ವಿದ್ಯಾರ್ಹತೆ :
- ಅ) ಅನಕ್ಷರಸ್ಥ ☐
- ಆ) ಪ್ರಾಥಮಿಕ ಶಿಕ್ಷಣ ☐
- ಇ) ಪ್ರೌಢ ಶಿಕ್ಷಣ ☐
- ಈ) ಪದವಿ ಪೂರ್ವ ☐
- ಉ) ಪದವಿ ಶಿಕ್ಷಣ ☐
- ಊ) ಸ್ನಾತಕೋತ್ತರ ☐
- ಋ) ಇತರೆ ☐

## ಸಾಮಾಜಿಕ ಮತ್ತು ಆರ್ಥಿಕ ಬದಲಾವಣೆಯ ವಿವಿರಗಳು:

೫. ನೀವು ಯಾವ ಉದ್ಯೋಗವನ್ನು ಮಾಡುತ್ತೀರಿ?

ಅ) ಕೂಲಿ ☐ ಆ) ಬೀಡಿಕಟ್ಟುವುದು ☐
ಇ) ಸ್ವ-ಉದ್ಯೋಗ ☐ ಈ) ಸರಕಾರಿ ನೌಕರರು ☐
ಉ) ಇತರೆ ☐

೬. ನೀವು ಸರ್ಕಾರೇತರ ಸಂಸ್ಥೆಗಳನ್ನು ಸೇರಲು ಪ್ರೇರಣೆಯಾರು?

ಅ) ವಯಕ್ತಿಕ ಆಸಕ್ತಿ ☐ ಆ) ಮಿತ್ರರು ☐
ಇ) ಕುಟುಂಬ ಸದಸ್ಯರು ☐ ಈ) ಸರ್ಕಾರೇತರ ಸಂಸ್ಥೆಯ ಸಿಬ್ಬಂದಿಗಳು ☐
ಉ) ಇತರೆ ☐

೭. ಎಷ್ಟು ವರ್ಷಗಳಿಂದ ನೀವು ಸರ್ಕಾರೇತರ ಸಂಸ್ಥೆಗಳ ಫಲಾನುಭವಿಗಳಾಗಿದ್ದೀರಿ?

ಅ) ೧ ರಿಂದ ೧೦ ವರ್ಷಗಳು ☐ ಆ) ೧೦ ರಿಂದ ೨೦ ವರ್ಷಗಳು ☐
ಇ) ೨೦ ರಿಂದ ೩೦ ವರ್ಷಗಳು ☐ ಈ) ೩೦ ವರ್ಷಗಳಗಿಂತ ಮೇಲ್ಪಟ್ಟು ☐

೮. ನೀವು ಸರ್ಕಾರೇತರ ಸಂಸ್ಥೆಗಳನ್ನು ಸೇರಿದಉದ್ದೇಶವೇನು?

ಅ) ಉಳಿತಾಯ ಮಾಡಲು ☐ ಆ) ವ್ಯಕ್ತಿತ್ವ ವಿಕಸನ ☐
ಇ) ಬಿಡುವಿನ ಸಮಯವನ್ನು ಕಳೆಯಲು ☐ ಈ) ಸಾಲವನ್ನು ಪಡೆಯಲು ☐
ಉ) ಇತರೆ ☐

೯. ನಿಮ್ಮ ಬಳಿ ಉಳಿತಾಯ ಖಾತೆಯಿದೆಯೇ?

ಅ) ಹೌದು ☐ ಆ) ಇಲ್ಲ ☐

ಎ) ಎಲ್ಲಿ ಉಳಿತಾಯ ಖಾತೆಗಳನ್ನು ಹೊಂದಿರುವಿರಿ?

ಅ) ಬ್ಯಾಂಕ್‌ಗಳು ☐ ಆ)ಸರ್ಕಾರೇತರ ಸಂಸ್ಥೆಗಳು ☐
ಇ) ಅಂಚೆ ಕಛೇರಿಗಳು ☐ ಈ) ಇತರೆ ☐

೧೦. ನಿಮ್ಮ ಹಿಂದಿನ ಸ್ಥಿತಿಗಿಂತ ಈಗಿನ ಸ್ಥಿತಿ ಆರ್ಥಿಕವಾಗಿ ಮತ್ತು ಸಾಮಾಜಿಕವಾಗಿ ಉತ್ತಮವಾಗಿದೆಯೇ?

ಅ) ಅತ್ಯುತ್ತಮವಾಗಿದೆ ☐ ಆ) ಉತ್ತಮವಾಗಿದೆ ☐
ಇ) ತೃಪ್ತಿಕರ ☐ ಈ) ಉತ್ತಮವಾಗಿಲ್ಲ ☐

## ಸ್ವ-ಉದ್ಯೋಗದ ವಿವರಗಳು:

೧೧. ನೀವು ಸ್ವ-ಉದ್ಯೋಗವನ್ನು ಮಾಡುತ್ತಿದ್ದೀರಾ?

ಅ) ಹೌದು ☐ ಆ) ಇಲ್ಲ ☐

೧೨. ಸರ್ಕಾರೇತರ ಸಂಸ್ಥೆಗಳಿಂದ ನಿಮಗೆ ಸ್ವ-ಉದ್ಯೋಗವನ್ನು ನಡೆಸಲು ಹಣಕಾಸಿನ ಸಹಾಯದೊರೆತಿದೆಯೇ?

ಅ) ಹೌದು ☐ ಆ) ಇಲ್ಲ ☐

೧೩. ನೀವು ಸದಸ್ಯರಾಗಿರುವ ಸರ್ಕಾರೇತರ ಸಂಸ್ಥೆಯ ಸ್ವ-ಉದ್ಯೋಗದಡಿಯಲ್ಲಿಎಷ್ಟು ಜನ ಕೆಲಸ ಮಾಡುತ್ತಾರೆ?

ಅ) ಮಹಿಳೆಯರ ಸಂಖ್ಯೆ ಎಷ್ಟು :
ಆ) ಪುರುಷರ ಸಂಖ್ಯೆ ಎಷ್ಟು :

೧೪. ನೀವು ಸದಸ್ಯರಾಗಿರುವ ಸಂಸ್ಥೆಯುಯಾವರೀತಿಯಸ್ವ-ಉದ್ಯೋಗವಕಾಶಗಳನ್ನು ನಡೆಸಲು ನಿಮಗೆ ಸಹಾಯ ನೀಡುತ್ತದೆ?

ಅ) ಕಿರುಉದ್ಯಮ ☐ ಆ) ಟೈಲರಿಂಗ್ ☐
ಇ) ಪಶು ಸಾಕಣೆ ಮತ್ತು ಹಾಲಿನ ಉತ್ಪಾದನೆ ☐ ಈ) ಮೀನು ಮಾರಾಟ ☐
ಉ) ಮಡಕೆ ಮಾಡುವುದು ☐ ಊ)ತರಕಾರಿ ಮಾರಾಟ ☐
ಋ) ಬಟ್ಟೆ/ಜವುಳಿ-ಮಾರಾಟ ☐ ಎ) ಇತರೆ ☐

೧೫. ನಿಮ್ಮ ಸಂಸ್ಥೆಯು ಸ್ವ-ಉದ್ಯೋಗವಕಾಶಗಳನ್ನು ನಡೆಸಲು ನಿಮಗೆ ತರಬೇತಿಗಳನ್ನು ನೀಡುತ್ತದೆಯೇ?

ಅ) ಹೌದು ☐ ಆ) ಇಲ್ಲ ☐

೧೬. ಹೇಗೆ ತರಬೇತಿಗಳನ್ನು ನೀಡುತ್ತಾರೆ ?

ಅ) ಕೆಲಸ ಮಾಡುವ ಮೊದಲು ☐ ಆ) ಕೆಲಸದ ನಂತರ ☐
ಇ) ಕೆಲಸ ಮಾಡುವಾಗಲೇ ☐ ಈ) ಇತರೆ ☐

೧೭. ನೀವು ಸ್ವ-ಉದ್ಯೋಗ ಮಾಡುವಲ್ಲಿ ಮಾನಸಿಕ ಒತ್ತಡಇದೆಯೇ?

ಅ) ಹೌದು ☐ ಆ) ಇಲ್ಲ ☐

## ಶೈಕ್ಷಣಿಕ ವಿವರಗಳು :

೧೮. ಸರ್ಕಾರೇತರ ಸಂಸ್ಥೆಗಳು ನಿಮ್ಮ ಮಕ್ಕಳ ವಿದ್ಯಾಭ್ಯಾಸದಲ್ಲಿ ಸಹಾಯವನ್ನು ಒದಗಿಸಿವೆಯೇ?

ಅ) ಹೌದು ☐ ಆ) ಇಲ್ಲ ☐

೧೯. ನೀವು ಸದಸ್ಯರಾಗಿರುವ ಸರ್ಕಾರೇತರ ಸಂಸ್ಥೆಯು ನಿಮಗೆ ಯಾವ ರೀತಿಯ ಶೈಕ್ಷಣಿಕ ಸಹಾಯಗಳನ್ನು ಒದಗಿಸಿದೆ ?

ಅ) ಉಚಿತ ಶಿಕ್ಷಣ ನೀಡುವುದು ☐ ಆ) ಶಾಲಾ ಶುಲ್ಕ ನೀಡುವುದು ☐
ಇ) ವಿಧ್ಯಾರ್ಥಿ ವೇತನಗಳನ್ನು ನೀಡುವುದು ☐ ಈ) ಸಮವಸ್ತ್ರಗಳನ್ನು ನೀಡುವುದು ☐
ಉ) ಪುಸ್ತಕಗಳನ್ನು ನೀಡುವುದು ☐ ಊ) ಇತರೆ ☐

೨೦. ನೀವು ಸದಸ್ಯರಾಗಿರುವ ಸರ್ಕಾರೇತರ ಸಂಸ್ಥೆಯುನೀಡುವ ಶಿಕ್ಷಣದ ಗುಣಮಟ್ಟ ಹೇಗಿದೆ?

ಅ) ಅತ್ಯುತ್ತಮವಾಗಿದೆ ☐ ಆ) ಉತ್ತಮವಾಗಿದೆ ☐
ಇ) ತೃಪ್ತಿಕರ ☐ ಈ) ಉತ್ತಮವಾಗಿಲ್ಲ ☐

೨೧. ನೀವು ಸದಸ್ಯರಾಗಿರುವ ಸರ್ಕಾರೇತರ ಸಂಸ್ಥೆಯುಗ್ರಾಮೀಣ ಮತ್ತು ಪರಿಶಿಷ್ಟ ಪಂಗಡಗಳಿಗೆ ಸೇರಿದ ವಿದ್ಯಾರ್ಥಿಗಳಿಗೆ ಮೀಸಲಾತಿಗಳನ್ನು ಒದಗಿಸಿದೆಯೇ?

ಅ) ಹೌದು ☐ ಆ) ಇಲ್ಲ ☐

## ಕೃಷಿ ಅಭಿವೃದ್ಧಿ ವಿವರಗಳು:

೨೨. ನೀವು ಕೃಷಿಕರೇ?

ಅ) ಹೌದು ☐ ಆ) ಇಲ್ಲ ☐

೨೩. ನಿಮಗೆ ಸರ್ಕಾರೇತರ ಸಂಸ್ಥೆಗಳಿಂದ ಕೃಷಿ ಅಭಿವೃದ್ಧಿಗೆ ಸಹಾಯ ದೊರೆತಿದೆಯೇ?

ಅ) ಹೌದು ☐ ಆ) ಇಲ್ಲ ☐

ಅ) ಯಾವರೀತಿಯ ಸಹಾಯ ದೊರೆತಿದೆ?

ಅ) ಹಣಕಾಸಿನ ಪೂರೈಕೆ ☐ ಆ) ಉತ್ತಮ ಬೀಜಗಳ ಪೂರೈಕೆ ☐
ಇ) ಕೃಷಿ ತರಬೇತಿಗಳನ್ನು ಒದಗಿಸುವುದು ☐ ಈ) ಕೀಟನಾಶಕಗಳ ಪೂರೈಕೆ ☐
ಉ) ಇತರೆ ☐

೨೪. ನಿಮಗೆ ಸರ್ಕಾರೇತರ ಸಂಸ್ಥೆಗಳಿಂದ ಕೃಷಿ ಸಾಲಗಳು ದೊರೆತಿವೆಯೇ?

ಅ) ಹೌದು ☐ ಆ) ಇಲ್ಲ ☐

೨೫. ಕೃಷಿಯಲ್ಲಿ ಸಾವಯವ ಮತ್ತು ಜೈವಿಕ ಗೊಬ್ಬರಗಳ ಬಳಕೆಯ ಬಗ್ಗೆ ಸಲಹೆ ಸೂಚನೆಗಳನ್ನು ನೀಡುತ್ತಾರೆಯೇ?

ಅ) ಹೌದು ☐ ಆ) ಇಲ್ಲ ☐

೨೬. ಕೃಷಿ ಆಧುನಿಕ ತಂತ್ರಜ್ಞಾನಗಳ ಬಗ್ಗೆ ತರಬೇತಿಗಳನ್ನು ನೀಡುತ್ತಾರೆಯೇ?

ಅ) ಹೌದು ☐ ಆ) ಇಲ್ಲ ☐

## ಮಹಿಳಾ ಅಭಿವೃದ್ಧಿ ವಿವರಗಳು :

೨೭. ನೀವು ಸದಸ್ಯರಾಗಿರುವ ಸರ್ಕಾರೇತರ ಸಂಸ್ಥೆಯು ಮಹಿಳೆಯರ ಅಭಿವೃದ್ಧಿಗೆ ಯಾವ ಕಾರ್ಯಕ್ರಮಗಳನ್ನು ಹಮ್ಮಿಕೊಂಡಿದೆ ?

ಅ) ಸ್ವ-ಉದ್ಯೋಗಒದಗಿಸುವುದು ☐ ಆ) ಆರೋಗ್ಯ ಮಾಹಿತಿಗಳನ್ನು ನೀಡುವುದು ☐
ಇ) ಹಣಕಾಸಿನ ಸಹಾಯಒದಗಿಸುವುದು ☐ ಈ) ಮಹಿಳೆಯರ ವ್ಯಕ್ತಿತ್ವ ವಿಕಸನ ☐
ಉ) ಮಹಿಳೆಯರಿಗೆ ಶಿಕ್ಷಣ ಒದಗಿಸುವುದು ☐ ಊ) ಇತರೆ ☐

೨೮. ನೀವು ಸದಸ್ಯರಾಗಿರುವ ಸರ್ಕಾರೇತರ ಸಂಸ್ಥೆಯ ಮಹಿಳಾ ಕಾರ್ಯಕಾರಿ ಸಭೆಗಳು ಎಷ್ಟು ದಿನಗಳಗೊಮ್ಮೆ ನಡೆಯುತ್ತದೆ?

ಅ) ೧ ವಾರಕ್ಕೊಮ್ಮೆ ☐ ಆ) ೨ ವಾರಕ್ಕೊಮ್ಮೆ ☐
ಇ) ೧ ತಿಂಗಳಗೊಮ್ಮೆ ☐ ಈ) ೨ ತಿಂಗಳಗೊಮ್ಮೆ ☐

೨೯. ನಿಮ್ಮ ಸಂಸ್ಥೆಗಳಲ್ಲಿ ಸದಸ್ಯರಾಗಿರುವ ಇತರ ಮಹಿಳೆಯರ ಸ್ಥಿತಿಗತಿಗಳು ಉತ್ತಮವಾಗಿವೆಯೇ ?

ಅ) ಅತ್ಯುತ್ತಮವಾಗಿದೆ ☐ ಆ) ಉತ್ತಮವಾಗಿದೆ ☐
ಇ) ತೃಪ್ತಿಕರ ☐ ಈ) ಉತ್ತಮವಾಗಿಲ್ಲ ☐

೩೦. ನೀವು ಸದಸ್ಯರಾಗಿರುವ ಸಂಸ್ಥೆಯು ಮಹಿಳೆಯರಿಗಾಗಿ ಮನೋರಂಜನಾ ಕಾರ್ಯಕ್ರಮಗಳನ್ನು ನಡೆಸುತ್ತದೆಯೇ?

ಅ) ಹೌದು ☐ ಆ) ಇಲ್ಲ ☐

೩೧. ನಿಮ್ಮ ಸಮಸ್ಯೆಗಳಗೆ ಸರ್ಕಾರೇತರ ಸಂಸ್ಥೆಗಳು ಸರಿಯಾದ ರೀತಿಯಲ್ಲಿ ಸ್ಪಂದಿಸುತ್ತವೆಯೇ?

ಅ) ಹೌದು ☐ ಆ) ಇಲ್ಲ ☐

೩೨. ಸಲಹೆ ಮತ್ತು ಪರಿಹಾರಗಳು :

ಸ್ಥಳ :
ದಿನಾಂಕ :

ಸಹಿ

# ಅನುಬಂಧ -೨ ನಕ್ಷೆಗಳು

## ೧. ಕರ್ನಾಟಕದ ನಕ್ಷೆ



## ೨.ದಕ್ಷಿಣ ಕನ್ನಡ ಜಿಲ್ಲೆಯ ನಕ್ಷೆ



# ಪರಾಮರ್ಶನ ಗ್ರಂಥಗಳು


೧. ಎಂ. ಚಂದ್ರ ಪೂಜಾರಿ, ಸಂಶೋಧಕರು ಮತ್ತು ಕ್ಷೇತ್ರಕಾರ್ಯ, ಹಂಪಿ: ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ, ೨೦೦೫

೨. ಎಂ ಚಂದ್ರ ಪೂಜಾರಿ, ಸಮಾಜ ಸಂಶೋಧನೆ , ಹಂಪಿ: ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ, ೨೦೦೫.

೩. ಎಂ ಚಂದ್ರ ಪೂಜಾರಿ, ಸಂಶೋಧನೆ ಏನು? ಏಕೆ? ಹೇಗೆ?, ಹಂಪಿ: ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ, ೨೦೦೯

೪. ಪ್ರೊ ಒಡೆಯರ್ ಡಿ ಹೆಗ್ಗಡೆ, ಗ್ರಾಮೀಣ ಅಭಿವೃದ್ಧಿ ಅಧ್ಯಯನಗಳು, ಬೆಂಗಳೂರು : ಸಿ ಪಿ ಇನ್ನೊವೇಶನ್ಸ್, ೨೦೦೯

೫. ಎಚ್ಚಾರ್ಕೆ, ಕರ್ನಾಟಕ ಆರ್ಥಿಕತೆ, ಬೆಂಗಳೂರು : ಸಪ್ನ ಬುಕ್ ಹೌಸ್, ೨೦೧೦

೬. ಎಚ್ಚಾರ್ಕೆ, ಅಭಿವೃದ್ಧಿ ಅರ್ಥಶಾಸ್ತ್ರ , ಬೆಂಗಳೂರು : ಸಪ್ನ ಬುಕ್ ಹೌಸ್, ೨೦೦೮

೭. ತಿಂಗಳಾಯ ನವೀನ್ ಚಂದ್ರ ಕೆ., "ಕರಾವಳಿ ಕರ್ನಾಟಕದ ಅಭಿವೃದ್ಧಿ: ಒಂದು ಐತಿಹಾಸಿಕ ದೃಷ್ಟಿ", ಮಂಗಳೂರು : ಮಂಗಳ ಪ್ರಕಾಶನ, ೨೦೦೯

೮. ವಿಷ್ಣು ಭಟ್ ಪಾದೆಕಲ್ಲು (ಸಂ.), ದಕ್ಷಿಣಕನ್ನಡ ಜಿಲ್ಲೆಯ ಪ್ರಾಚೀನ ಇತಿಹಾಸ,ಉಡುಪಿ: ರಾಷ್ಟ್ರ ಕವಿ ಗೋವಿಂದ ಪೈ ಸಂಶೋಧನಾ ಕೇಂದ್ರ, ೨೦೦೪.

೯. ಶೌಕತ್ ಆಲಿ ಎಂ ಮೇಗಲಮನಿ ಮತ್ತು ಡಾ.ಪಿ.ಎಂ ಹೊನಕೇರಿ," ಸ್ತ್ರೀಯರ ಸಬಲೀಕರಣದಲ್ಲಿ ಶಿಕ್ಷಣದ ಪಾತ್ರ": ,೨೦೦೭

೧೦.ಜೋಮನ್ ಎಂ. ಜಿ ಈ ಮತ್ತು ಮಾಧವಿ ಮೆಹತಾ,"ವಿಶನ್ಎಂಡ್ ಪ್ರಾಕ್ಟಿಸ್", ಜೂನ್ ೧೯೯೬, ಪೇಜ್ ನಂ ೨೭-೩೪.

೧೧.ಸ್ವಾಪನ್ಗ್ಯಾರೈನ್, "ಟ್ರೈನಿಂಗ್ ಗ್ರಾಸ್‌ರೂಟ್ಸ್ ಲೆವೆಲ್ ವರ್ಕರ್ಸ್ ಇನ್ ಎಂಪವರಿಂಗ್ ದಿ ರೂರಲ್ ಪುವರ್" ವಿ ೫೪, ಜುಲೈ ೧೯೯೩, ಪೇಜ್ ನಂ ೩೮೧-೩೯೨.

೧೨.ಅಜಯ್ಎಸ್ ಮೆಹತಾ," ಮೈಕ್ರೋ ಪಾಲಟಿಕ್ಸ್ಆಫ್ ವೋಲೆಂಟರಿಎಕ್ಷ್ನ್, ಆನ್ ಎನಾಟೊಮಿ ಆಫ್ ಚೇಂಜ್ ಇನ್‌ಟು ವಿಲೇಜಸ್", ವಿ ೩, ನವಂಬರ್ ೧೯೯೬, ಪೇಜ್ ನಂ ೩೧-೫೪

೧೩. ಲವಾನಿ ಬಿ .ಟಿ, "ನೊನ್-ಗವರ್ನ್‌ಮೆಂಟ್ ಆರ್‌ಗನೈಸೇಶನ್ ಇನ್ ಡೆವೆಲೊಪ್‌ಮೆಂಟ್",ಜೈಪುರ್: ರಾವತ್ ಪಬ್ಲಿಕೇಶನ್, ೨೦೦೪.

೧೪.ಡೊನೆಲ್ಸನ್ ಆರ್. ಎಫ್, ಗ್ರೂಪ್ ಡೈನಾಮಿಕ್ಸ್, ಕ್ಯಾಲಿಫೋರ್ನಿಯಾ : ಕೋಲ್ ಪಬ್ಲಿಶಿಂಗ್ ಕಂಪೆನಿ, ೧೯೯೦.

೧೫.ಜೈರಾಮ್ ಕೆ. ಸಮಾಜಶಾಸ್ತ್ರ ಮತ್ತು ಸಾಮಾಜಿಕ ಬದಲಾವಣೆ, ದಿಲ್ಲಿ: ಡೊಮಿನೆಂಟ್ ಪಬ್ಲಿಕೇಶನ್ಸ್ ಡಿಸ್ಟ್ರಿಬ್ಯುಟರ್ಸ್, ೨೦೦೪.

೧೬.ಮಿಸ್‌ರಾ, ಯತೀಶ್, ಎಂಪವರಿಂಗ್ ಪೀಪಲ್ – ಗ್ರಾಸ್‌ರೂಟ್ಸ್ ಆರ್‌ಗನೈಸೇಶನ್ ಎಂಡ್ ರೂರಲ್ ಡೆವೆಲೊಪ್‌ಮೆಂಟ್, ನ್ಯೂ ದಿಲ್ಲಿ: ಕಾನಿಷ್ಕ ಪಬ್ಲಿಕೇಶನ್ಸ್ ,ಡಿಸ್ಟ್ರಿಬ್ಯುಟರ್ಸ್, ೨೦೦೨.

೧೭.ಬೋರ್ಗೇಟ್ ಎಮ್. ವಿ, ಗ್ರೂಪ್ ಎಂಟರ್‌ಪ್ರಿನಿಯರ್‌ಶಿಫ್ ವಿದ್ ರೂರಲ್ ಪುವರ್, ನ್ಯೂ ದಿಲ್ಲಿ: ಇಂಡಿಯನ್ ಸೋಸಿಯಲ್ ಇನ್ಸ್‌ಟಿಟ್ಯುಟ್, ೧೯೮೯.

೧೮. ಡಾ. ಜಯಶೀಲ, ಗ್ರಾಮೀಣ ಅಭಿವೃದ್ಧಿ, ಮಂಗಳ ಗಂಗೋತ್ರಿ, ೨೦೦೬

೧೯.ಚಿತ್ವನ್ ತ್ರಿವೇದಿ, ಸೋಸಿಯಲ್ ಎಂಟರ್‌ಪ್ರಿನಿಯರ್‌ಶಿಫ್ ಬಿಬ್‌ಲಿಯೋಗ್ರಫೀ, ಜರ್‌ನಲ್ ಆಫ್ ಎಂಟರ್‌ಪ್ರಿನಿಯರ್‌ಶಿಫ್, ವಾಲ್ ೧೯, ನಂ ೧, ಜೂನ್ ೨೦೧೦ ಪಿಪಿ ೮೧–೮೫.

೨೦.ರಾವ್ ವಿ.ಎಂ, ಎಂಪವರಿಂಗ್ ರೂರಲ್ ವುಮನ್, ನ್ಯೂ ದಿಲ್ಲಿ: ಅನ್‌ಮೋಲ್ ಪಬ್ಲಿಕೇಶನ್ಸ್.

೨೧.ವಿಟ್ಟೆವಿಲ್, ಸುರೇಂದ್ರ ಕೆ, ಕಮ್ಯುನಿಟಿ ಪಾರ್ಟಿಸಿಪೇಶನ್ – ಎಂಪವರಿಂಗ್ ದಿ ಪುವರೆಸ್ಟ್– ರೋಲ್ ಆಫ್ ಎನ್.ಜಿ.ಒ, ನ್ಯೂ ದಿಲ್ಲಿ: ವೆತ್ರಿ ಪಬ್ಲಿಶರ್ಸ್, ೧೯೯೨.

೨೨. ರವೀಂದ್ರನಾಥ ಕೆ., ಅಧ್ಯಯನದ ವಿಧಿ ವಿಧಾನಗಳು, ಹಂಪಿ: ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ, ೨೦೦೮.

೨೩.ಡಾ. ಜಯಶೀಲ, ಭಾರತದ ಆರ್ಥಿಕ ನೀತಿ, ಮಂಗಳ ಗಂಗೋತ್ರಿ, ೨೦೦೬.

## ಪತ್ರಿಕೆಗಳು

- ಉದಯವಾಣಿ, ಕನ್ನಡ ದೈನಿಕ, ವಿವಿಧ ಸಂಚಿಕೆಗಳು.
- ವಿಜಯ ಕರ್ನಾಟಕ, ಕನ್ನಡ ದೈನಿಕ, ವಿವಿಧ ಸಂಚಿಕೆಗಳು.
- ಪ್ರಜಾವಾಣಿ, ಕನ್ನಡ ದೈನಿಕ, ವಿವಿಧ ಸಂಚಿಕೆಗಳು.
- ದಿ ಹಿಂದು, ಇಂಗ್ಲಿಷ್ ದೈನಿಕ, ವಿವಿಧ ಸಂಚಿಕೆಗಳು.